ಕೆಸಿಎಸ್ (ಸಿಸಿಎ) ನಿಯಮಾವಳಿಗಳು ೧೯೫೭ ರ ನಿಯಮ ೧೧-ಎ (೨) ರನ್ವಯ ಇಲಾಖಾ ಮುಖ್ಯಸ್ಥರು ಸಿಸಿಎ ನಿಯಮ ೧೧ ರಡಿಯಲ್ಲಿ ಆರೋಪಣಾ ಪಟ್ಟಿಯನ್ನು ಜಾರಿ ಗೊಳಿಸಿರುವುದು ಕ್ರಮಬದ್ಧವಾಗಿದ್ದರಿಂದ, ನಿರ್ದೇಶಕರು ಮುಂದಿನ ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಆಪಾದಿತರು ಆರೋಪಣಾ ಪಟ್ಟಿಗೆ ಸಲ್ಲಿಸಿದ್ದ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ವಿವರವಾದ ವಿಚಾರಣೆ ನಡೆಸುವುದು ಸೂಕ್ತವೆಂದು ನಿರ್ಣಯ ಕೈಗೊಂಡು, ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಮೇಲೆ ಓದಲಾದ ಕ್ರಮಾಂಕ (೩) ರ ದಿನಾಂಕ:೭.೧೧.೨೦೦೨ ರ ಸರ್ಕಾರಿ ಆದೇಶದ ಮೂಲಕ ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ಪ್ರಾಂಶುಪಾಲರು, ಡಯಟ್, ಧಾರವಾಡ, ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರನ್ನು ಮಂಡನಾಧಿಕಾರಿಯಾಗಿಯೂ ನೇಮಕ ಮಾಡಿ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರಮಾಂಕ (೪) ರ ದಿನಾಂಕ:೨೫.೪.೨೦೦೩ ರಂದು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ವಿಚಾರಣೆಯಲ್ಲಿ ಕೆಳಕಂಡ ಕಾರಣದಿಂದಾಗಿ ಆರೋಪಿತರ ಮೇಲಿನ ಆರೋಪವು ಸಾಬೀತಾಗಿದೆಯೆಂದು ನಿರ್ಣಯಿಸಿದ್ದಾರೆ.

೧. ಶ್ರೀಮತಿ ವಿದ್ಯಾ ಎ.ವೈದ್ಯ ಇವರು ದಿನಾಂಕ:೬.೮.೧೯೯೬ ರಿಂದ ೧೩.೮.೧೯೯೯ ರವರೆಗೆ ೩ ವರ್ಷ ಗಳ ಕಾಲ ಅನಧಿಕೃತ ಗೈರುಹಾಜರಾಗಿರುವುದು ವಿಚಾರಣೆ ಕಾಲಕ್ಕೆ ದಾಖಲಾತಿಗಳಿಂದ ದೃಢಪಟ್ಟಿದೆ. ಸದರಿಯವರು ಈ ದೀರ್ಘಾವಧಿಯ ಅನಧಿಕೃತ ಗೈರುಹಾಜರಿಯಲ್ಲಿ ಜವಾಬ್ದಾರಿಯುತ ರೀತಿಯಿಂದ ರಜಾ ಮಂಜೂರು ಪಡೆಯದೆ ಹಾಗೂ ಸಂಸ್ಥೆಯ ಯಾವ ಪತ್ರಗಳಿಗೂ ಉತ್ತರ ನೀಡದೇ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿಯಿಂದ ವರ್ತಿಸಿ ಕರ್ತವ್ಯಲೋಪ ಎಸಗುವುದರ ಮೂಲಕ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದಾರೆ ಎಂಬುದು ವಿಚಾರಣೆಯಿಂದ ದೃಢಪಟ್ಟಿದೆ. ಇದರಿಂದ ಕಾಲೇಜಿನ ವಿದ್ಯಾರ್ಥಿಗಳಿಗೆ ಆಂಗ್ಲಭಾಷಾ ಭೋದನೆಯ ಪಾಠಪ್ರವಚನಕ್ಕೆ ಆರೋಪಿತ ನೌಕರನಿಂದ ತೊಂದರೆ ಉಂಟಾಗಿ ರುವುದು ದೃಢಪಟ್ಟಿದೆ. ಸದರಿಯವರು ಕಾರ್ಯನಿರ್ವಹಿಸಿದ ಹಿಂದಿನ ಸ್ಥಳಗಳಲ್ಲಿ ಸಾಕಷ್ಟು ಅನಾನುಕೂಲತೆ ಉಂಟಾಗಿ, ಅವ್ಯವಸ್ಥೆಯಿಂದ ಬಳಲುತ್ತಿದ್ದರಿಂದ ಈ ರೀತಿ ಅನಧಿಕೃತವಾಗಿ ಗೈರುಹಾಜರಾಗಬೇಕಾಯಿತು ಎಂದು ವಿಚಾರಣೆಯಲ್ಲಿ ಆಪಾದಿತರು ತಿಳಿಸಿದ್ದಾರೆ. ಆದರೆ ದೀರ್ಘಕಾಲದ ಗೈರುಹಾಜರಿ ಸಮಯದಲ್ಲಿ ಸದರಿಯವರು ಅಸ್ವಸ್ಥರಾಗಿದ್ದ ಬಗ್ಗೆ ಹಾಗೂ ವೈದ್ಯಕೀಯ ಉಪಚಾರ ಪಡೆದಿರುವ ಬಗ್ಗೆ ಯಾವುದೇ ದಾಖಲೆಗಳನ್ನು ಒದಗಿಸಿರುವುದಿಲ್ಲ ಹಾಗೂ ವಿಚಾರಣಾ ಕಾಲಕ್ಕೆ ಹಾಜರು ಪಡಿಸಿರುವುದಿಲ್ಲ. ತಮ್ಮಲ್ಲಿ ಯಾವುದೇ ದಾಖಲೆ ಇರುವುದಿಲ್ಲವೆಂದು ತಿಳಿಸಿ, ಅವುಗಳನ್ನು ಒದಗಿಸಲು ವಿಫಲರಾಗಿದ್ದಾರೆ.

೨. ವಿಚಾರಣೆಯಲ್ಲಿ ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ಆಪಾದಿತರು ತಮಗೆ ಕ್ಷಯರೋಗ ಉಂಟಾಗಿತ್ತೆಂದೂ ಹಾಗೂ ಮಗುವಿಗೆ ಅಲರ್ಜಿಯಿಂದ ಅಸ್ತಮಾ ಉಂಟಾಗಿ ಆ ಸ್ಥಳದಲ್ಲಿ ಇರುವುದು ಕಷ್ಟವಾಗಿದ್ದರಿಂದ ಅನಧಿಕೃತವಾಗಿ ಗೈರುಹಾಜರಾಗಿರುವುದಾಗಿ ತಿಳಿಸಿ, ತಮ್ಮಿಂದ ಇಲಾಖೆಗೆ ಹಾಗೂ ವಿದ್ಯಾರ್ಥಿಗಳಿಗೆ ಆದ ತೊಂದರೆಗೆ ಕ್ಷಮೆಯನ್ನು ಕೋರಿರುತ್ತಾರೆ ಹಾಗೂ ಲಿಖಿತ ಹೇಳಿಕೆ ನೀಡಿರುತ್ತಾರೆ.

ವಿಚಾರಣೆಯಲ್ಲಿ ಆಪಾದಿತರ ಮೇಲಿನ ಆರೋಪವು ಸಾಬೀತಾಗಿದ್ದರಿಂದ ಮೇಲೆ ಓದಲಾದ ಕ್ರಮಾಂಕ (೫) ರ ದಿನಾಂಕ:೨೩.೫.೨೦೦೩ ರಂದು ವಿಚಾರಣಾ ವರದಿಯನ್ನು ೨ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿಗೊಳಿಸಿ, ವಿಚಾರಣಾ ವರದಿಯಲ್ಲಿನ ನಿರ್ಣಯದ ಮೇಲೆ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಶ್ರೀಮತಿ ವಿದ್ಯಾ ಎ.ವೈದ್ಯ ಇವರು ಮೇಲೆ ಓದಲಾದ ಕ್ರಮಾಂಕ (೬) ರ ದಿನಾಂಕ:೬.೬.೨೦೦೩ ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿದ್ದು, ಹೇಳಿಕೆಯಲ್ಲಿನ ಅಂಶಗಳು ಕೆಳಕಂಡಂತಿರುತ್ತದೆ:-

೧. ಪದವಿ ಪೂರ್ವ ಶಿಕ್ಷಣ ಇಲಾಖಾ ನಿರ್ದೇಶಕರಿಂದ ದಿನಾಂಕ:೨೧.೪.೧೯೯೯ ರ ನೋಟೀಸ್ ತಲುಪಿದಾಗ ನಿರ್ದೇಶಕರನ್ನು ಖುದ್ದಾಗಿ ಭೇಟಿಯಾಗಿ ನಿಜಸ್ಥಿತಿ ವಿವರಿಸಿರುತ್ತೇನೆ. ದಿನಾಂಕ:೬.೮.೧೯೯೬ ರಿಂದ ೧೩.೮.೧೯೯೯ ರವರೆಗೆ ಆರೋಗ್ಯ ಸರಿಯಿಲ್ಲದ ಕಾರಣ ನಾನು ಕ್ಷಯ ರೋಗದಿಂದ ಬಳಲುತ್ತಿದ್ದರಿಂದ ಮತ್ತು ವೈದ್ಯರ ಸಲಹೆ ಮೇರೆಗೆ ಎರಡೂವರೆ ವರ್ಷ ವಿಶ್ರಾಂತಿಯಲ್ಲಿರಬೇಕೆಂದು ಸೂಚಿಸಿದ್ದರ ಮೇರೆಗೆ ಕಾಲೇಜಿಗೆ ಹಾಜರಾಗಲು ಸಾಧ್ಯವಾಗಲಿಲ್ಲ. ನನ್ನ ಮಗುವಿಗೆ ಅಸ್ತಮಾ ಖಾಯಿಲೆಯಾಗಿದ್ದರಿಂದ ಹಾಗೂ ಟ್ಯುಬೆಕ್ಟಮಿ ಶಸ್ತ್ರಚಿಕಿತ್ಸೆಯ ನಂತರ ನಾನು ಟ್ಯುಬರ್‌ಕಿಲೋಸಿಸ್ (ಕ್ಷಯ ರೋಗ) ದಿಂದ ಬಳಲುತ್ತಿದ್ದರಿಂದ ಕಾರ್ಯನಿರ್ವಹಿಸುತ್ತಿದ್ದ ಯಲಬುರ್ಗಾ ತಾಲ್ಲೂಕಿನ ಮಂಗಳೂರಿನಲ್ಲಿ ವೈದ್ಯಕೀಯ ಸೌಲಭ್ಯಗಳಿಂದ ವಂಚಿತವಾದ ಕಾರಣ ಕಚೇರಿಗೆ ಹಾಜರಾಗಿಲ್ಲ. ಮಾನಸಿಕ ಸ್ವಾಸ್ತವನ್ನು ಕಳೆದುಕೊಂಡು ಮಾನಸಿಕ ಸ್ಥೈರ್ಯ ಕಳೆದುಕೊಂಡು ಕರ್ತವ್ಯ ನಿರ್ವಹಿಸಲು ಸಾಧ್ಯವಾಗಲಿಲ್ಲ.

೨. ೧೯೯೬ ಪೂರ್ವದಲ್ಲಿ ೯ ವರ್ಷ ಉಪನ್ಯಾಸಕಿಯಾಗಿ ಸತತವಾಗಿ ನಿಷ್ಠೆಯಿಂದ ಸೇವೆ ಸಲ್ಲಿಸಿದ್ದೇನೆ. ಈ ಅವಧಿಯಲ್ಲಿ ಯಾವುದೇ ಕರ್ತವ್ಯ ನಿರ್ಲಕ್ಷತೆ ಮಾಡಿಲ್ಲ.

೩. ದಿನಾಂಕ:೬.೮.೧೯೯೬ ರಿಂದ ೧೩.೮.೧೯೯೯ ರವರೆಗೆ ಅನಧಿಕೃತ ಗೈರುಹಾಜರಾಗಲು ಅನಾರೋಗ್ಯವೇ ಕಾರಣವೆಂಬುದಕ್ಕೆ ಸಂಬಂಧಿಸಿದ ಸಾರ್ವಜನಿಕ ಆಸ್ಪತ್ರೆ, ಕುಷ್ಠಗಿ, ಇದರ ಹಿರಿಯ ತಜ್ಞರು ನೀಡಿರುವ ಪ್ರಮಾಣ ಪತ್ರವನ್ನು ಚೌಕಾಸಿ ಕಾಲಕ್ಕೆ ವಿಚಾರಣಾಧಿಕಾರಿಗಳ ಮುಂದೆ ಹಾಜರುಪಡಿಸಿದ್ದು ಇರುತ್ತದೆ. ಆದರೆ ವಿಚಾರಣಾ ಅಧಿಕಾರಿಗಳು ಪರಿಗಣಿಸಿಲ್ಲ. ಪ್ರಮಾಣ ಪತ್ರದಲ್ಲಿ ತಾಂತ್ರಿಕ ದೋಷಗಳಿರುತ್ತದೆ ಎಂದು ಒಪ್ಪಲು ನಿರಾಕರಿಸಿದ್ದಾರೆ.

೪. ವಿಚಾರಣಾಧಿಕಾರಿಗಳು ಹಲವಾರು ಆಪಾದನೆಗಳ ಬಗ್ಗೆ ವಿಚಾರಣೆಯಲ್ಲಿ ಪ್ರಸ್ತಾಪ ಮಾಡಿದ್ದ ಅಂಶವು ಆರೋಪಣಪಟ್ಟಿಯಲ್ಲಿ ಇರುವುದಿಲ್ಲ.

೫. ಮಂಡನಾಧಿಕಾರಿಗಳು ಹಾಜರುಪಡಿಸಿದ ಸಾಕ್ಷಿಗಳಿಗೆ ಪಾಟಿಸವಾಲು ಮಾಡಲು ನನಗೆ ಅವಕಾಶ ಮಾಡಿಕೊಡ ಬೇಕಾಗಿತ್ತು. ಮಂಡನಾಧಿಕಾರಿ ಆಧರಿಸುವ ಸಾಕ್ಷ್ಯಾಧಾರಗಳ ವಿವರಣೆಯನ್ನು ಚೌಕಾಶಿ ಕಾಲಕ್ಕೆ ಅಥವಾ ಅದಕ್ಕೂ ಮೊದಲು ನನಗೆ ನೀಡಿ, ಅವುಗಳ ಬಗ್ಗೆ ವಿವರಣೆ ನೀಡಲು ಅವಕಾಶ ಮಾಡಿಕೊಡಬೇಕಾಗಿತ್ತು.

೬. ದಿನಾಂಕ:೧೪.೮.೧೯೯೯ ರಿಂದ ನಾನು ಮೊದಲು ಮುಂಡರಗಿ ತಾಲ್ಲೂಕು ಸಿಂಗಟಲೂರ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿಯೂ, ನಂತರ ಗದಗ್ ನಲ್ಲಿರುವ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ, ಇಲ್ಲಿಯವರೆಗೂ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಾ ಬಂದಿದ್ದೇನೆ. ಈ ಅವಧಿಯ ಸೇವೆಯನ್ನು ಪಡೆದಂತಹ ಪ್ರಾಂಶುಪಾಲರಾದ ಶ್ರೀ ಜೋಷಿ ಇವರನ್ನು ಸರ್ಕಾರಿ ಸಾಕ್ಷಿ ಎಂದು ಪರಿಗಣಿಸಿದ್ದರೂ ಸಹ, ದಿ:೧೪.೮.೧೯೯೯ ರ ನಂತರದ ನನ್ನ ಸೇವೆಯ ಬಗ್ಗೆ ಸಾಕ್ಷಿ ತೆಗೆದುಕೊಂಡಿಲ್ಲ.

೭. ವಿಚಾರಣಾಧಿಕಾರಿಗಳ ವರದಿ ಏಕಪಕ್ಷೀಯವಾಗಿದೆ. ನನ್ನ ಮಗುವಿನ ಅನಾರೋಗ್ಯದ ಹಾಗೂ ತನ್ನ ಅನಾರೋಗ್ಯದ ಬಗ್ಗೆ ಪ್ರಸ್ತಾಪ ಮಾಡಿ ಲಿಖಿತ ಸಾಕ್ಷ್ಯಾಧಾರಗಳನ್ನು ಸಲ್ಲಿಸಿದ್ದರೂ ಸಂಶಯ ವ್ಯಕ್ತಪಡಿಸಿ ವರದಿ ನೀಡಿರುವುದು ಸಮಂಜಸವಲ್ಲ.

೮. ಅನಾರೋಗ್ಯದಿಂದ ಕಾಲೇಜಿಗೆ ಹಾಜರಾಗಲು ಸಾಧ್ಯವಾಗಿಲ್ಲ, ಕಾರಣ ನನ್ನ ವಿವರಣೆಯನ್ನು ಸಹಾನುಭೂತಿಯಿಂದ ಪರಿಗಣಿಸಿ ಶಿಸ್ತು ಕ್ರಮ ಕೈಬಿಡುವಂತೆ ಪ್ರಾರ್ಥಿಸುತ್ತೇನೆ.

ವಿಚಾರಣಾ ವರದಿಯಲ್ಲಿನ ನಿರ್ಣಯ, ಇದಕ್ಕೆ ಸಂಬಂಧಪಟ್ಟ ದಾಖಲೆ ಹಾಗೂ ಆಪಾದಿತರು ನೀಡಿರುವ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಶ್ರೀಮತಿ ವಿದ್ಯಾ ಎ.ವೈದ್ಯ ಇವರು ದಿ:೬.೮.೧೯೯೬ ರಿಂದ ದಿ:೧೩.೮.೧೯೯೯ ರವರೆಗೆ ಅನಧಿಕೃತ ಗೈರು ಹಾಜರಾಗಿರುವುದು ವಿಚಾರಣೆಯಲ್ಲಿ ದೃಢಪಟ್ಟಿದೆ. ಈ ಅವಧಿಯಲ್ಲಿ ಸದರಿಯವರು ಕ್ಷಯ ರೋಗದಿಂದ ಬಳಲುತ್ತಿದ್ದೇನೆಂದು ತಿಳಿಸಿದ್ದರೂ ಸಹ ಇದನ್ನು ಸಮರ್ಥಿಸಿಕೊಳ್ಳಲು ವಿಚಾರಣೆಯ ಸಂದರ್ಭದಲ್ಲಾಗಲೀ ಹಾಗೂ ೨ನೇ ಕಾರಣ ಕೇಳುವ ನೋಟೀಸಿಗೆ ಉತ್ತರ ನೀಡುವ ಸಂದರ್ಭದಲ್ಲಾಗಲೀ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಿಲ್ಲ. ಅನಧಿಕೃತ ಗೈರುಹಾಜರಾದ ಸಂದರ್ಭದಲ್ಲಿ ತಾನು ಕಾರ್ಯನಿರ್ವಹಿಸುತ್ತಿದ್ದ ಕಾಲೇಜಿನ ಪ್ರಾಂಶುಪಾಲರಿಂದಾಗಲೀ ಹಾಗೂ ಅದಕ್ಕೂ ಮೇಲ್ಪಟ್ಟ ಅಧಿಕಾರಿಗಳಿಂದಾಗಲೀ ಪೂರ್ವಭಾವಿಯಾಗಿ ಯಾವುದೇ ಅನುಮತಿ ಪಡೆದಿಲ್ಲ. ಹಾಗೂ ಈ ಅವಧಿಯಲ್ಲಿ ಯಾವುದೇ ಪತ್ರ ವ್ಯವಹರಿಸಿರುವುದಿಲ್ಲ. ಇದರಿಂದಾಗಿ ಶ್ರೀಮತಿ ವಿದ್ಯಾ ಎ.ವೈದ್ಯ ಇವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ಒಪ್ಪಿಕೊಳ್ಳುವಂತಹ ಯಾವುದೇ ದಾಖಲೆ ಹಾಗೂ ವೈದ್ಯಕೀಯ ಪ್ರಮಾಣ ಪತ್ರದಿಂದ ಸಮರ್ಥಿಸಿಕೊಳ್ಳಲು ಸಂಪೂರ್ಣವಾಗಿ ವಿಫಲರಾಗಿದ್ದಾರೆ. ಕೆಸಿಎಸ್‌ಆರ್ ನಿಯಮ ೧೦೮ ರ ಪ್ರಕಾರ ಸರ್ಕಾರಿ ನೌಕರರು ೪ ತಿಂಗಳಿಗೂ ಮೀರಿದ ಅವಧಿಗೆ ಗೈರು ಹಾಜರಾಗಿದ್ದಲ್ಲಿ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ದಂಡನೆಗೆ ಅರ್ಹರಾಗುತ್ತಾರೆ. ಶ್ರೀಮತಿ ವಿದ್ಯಾ ಎ.ವೈದ್ಯ ಇವರು ಅನಧಿಕೃತವಾಗಿ ಗೈರುಹಾಜರಾಗಿರುವುದು ಕೆಸಿಎಸ್ (ಸಿಸಿಎ) ನಿಯಮಾವಳಿಗಳು ೧೯೫೭ ರ ನಿಯಮ ೧೧ ರಡಿ ನಡೆಸಲಾದ ವಿಚಾರಣೆಯಲ್ಲಿ ಸಾಬೀತಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಡಿ ೬೦ ಡಿಜಿಡಿ ೨೦೦೨, ಬೆಂಗಳೂರು ದಿನಾಂಕ: ೧೯ನೇ ಫೆಬ್ರವರಿ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀಮತಿ ವಿದ್ಯಾ ಎ. ವೈದ್ಯ ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಸಿದ್ದಲಿಂಗ ನಗರ, ಗದಗ್, ಇವರನ್ನು ಕೆಸಿಎಸ್ (ಸಿಸಿಎ) ನಿಯಮಾವಳಿಗಳು ೧೯೫೭ ರ ನಿಯಮ ೮(viii) ರಡಿ ಸರ್ಕಾರವು ಸದರಿಯವರನ್ನು ಸೇವೆಯಿಂದ **"ವಜಾ ಮಾಡಿ"** ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 247

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.(ಸೇ-೧,೨).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಕೆ.ಎಂ. ಮಕ್ಬೂಲ್, ನಿವೃತ್ತ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು, ದೋಷಮುಕ್ತರನ್ನಾಗಿಸುವ ಬಗ್ಗೆ - ವಿಚಾರಣೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ: ಆನಾಸ 53 ಅಇಸೇ 98, ದಿನಾಂಕ: 13-7-2001.
2. ಸರ್ಕಾರದ ಆದೇಶ ಸಂಖ್ಯೆ: ಆನಾಸ 53 ಆಇಸೇ 98, ದಿನಾಂಕ: 8-10-2001.

**ಪ್ರಸ್ತಾವನೆ:**

ಶ್ರೀ ಕೆ.ಎಂ. ಮಕ್ಬೂಲ್, ನಿವೃತ್ತ ಉಪ ನಿರ್ದೇಶಕರು, ಅವರು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಮೈಸೂರಿನಲ್ಲಿ ಔಪಚಾರಿಕ ಪಡಿತರ ಅಧಿಕಾರಿಯಾಗಿ (ಸಹಾಯಕ ನಿರ್ದೇಶಕರು) ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ವರ್ತಕರು ನಕಲಿ ಸೀಮೆಎಣ್ಣೆ ಕೂಪನ್‌ಗಳನ್ನು ಮುದ್ರಿಸಿ, ಪಡಿತರ ಸೀಮೆಎಣ್ಣೆ ದುರುಪಯೋಗಪಡಿಸಿಕೊಳ್ಳುತ್ತಿದ್ದ ಬಗ್ಗೆ ತನಿಖೆ ನಡೆಸಿ, ಸಕಾಲದಲ್ಲಿ ಕ್ರಮ ಕೈಗೊಳ್ಳಲಿಲ್ಲ ಎಂಬ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ನೋಟಿಸ್‌ನೊಂದಿಗೆ ದೋಷಾರೋಪಣೆ ಜಾರಿ ಮಾಡುವ ಮೂಲಕ ಅವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಲಾಯಿತು. ಸದರಿ ನೋಟೀಸ್ ಅಧಿಕಾರಿಗಳು ನೀಡಲಾದ ಉತ್ತರದಿಂದ ತೃಪ್ತಿಯಾಗದ ಸರ್ಕಾರ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಉದ್ದೇಶದಿಂದ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಲು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಜಂಟಿ ನಿರ್ದೇಶಕರನ್ನು ವಿಚಾರಣಾಧಿಕಾರಿಯನ್ನಾಗಿಯೂ, ಉಪ ನಿರ್ದೇಶಕರು (ನಾ.ಸ. ಮತ್ತು ಗ್ರಾ.ವ್ಯ), ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಮೇಲೆ (2)ರಲ್ಲಿನ ಉಲ್ಲೇಖದಲ್ಲಿ ಆದೇಶಿಸಲಾಗಿದೆ. ನಿವೃತ್ತ ಅಧಿಕಾರಿಯು ವಿಭಾಗಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ಬದಲಿಸಿಕೊಡುವಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ದಾಖಲಿಸಿದ್ದರ ಪರಿಣಾಮ, ಇದುವರೆವಿಗೂ ವಿಚಾರಣೆಯನ್ನು ಪ್ರಾರಂಭಿಸಲಾಗಿಲ್ಲ. ಈ ಮಧ್ಯೆ ಅಧಿಕಾರಿಯು ಸರ್ಕಾರಕ್ಕೆ ಮನವಿ ಸಲ್ಲಿಸುತ್ತಾ, ಇಂತಹುದೇ ಪ್ರಕರಣಗಳು ಬೆಂಗಳೂರಿನಲ್ಲಿ ಜರುಗಿದ್ದರ ಸಂಬಂಧ, ಸಂಬಂಧಪಟ್ಟ ಅಧಿಕಾರಿ/ನೌಕರರುಗಳ ವಿರುದ್ಧ ಪ್ರಾರಂಭಿಸಲಾಗಿದ್ದ ಶಿಸ್ತು ಕ್ರಮವನ್ನು ಸರ್ಕಾರ ಕೈಬಿಟ್ಟಿರುವುದರಿಂದ, ಸದರಿ ತತ್ವವನ್ನು ಆಧರಿಸಿ, ತನ್ನ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು, ತಡೆಹಿಡಿದಿರುವ ತನ್ನ ನಿವೃತ್ತಿ ಉಪದಾನಗಳನ್ನು ಬಿಡುಗಡೆ ಮಾಡುವಂತೆ ಪ್ರಾರ್ಥಿಸಿರುತ್ತಾರೆ. ಅಧಿಕಾರಿಯ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ನಿವೃತ್ತ ಆಪಾದಿತ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡಲು ತೀರ್ಮಾನಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 53 ಅಇಸೇ 98(ಭಾ), ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಎಂ. ಮಕ್ಬೂಲ್, ನಿವೃತ್ತ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಅವರ ವಿರುದ್ಧ ಬಾಕಿ ಇದ್ದ ಇಲಾಖಾ ವಿಚಾರಣೆಯನ್ನು ಸರ್ಕಾರ ಕೈಬಿಟ್ಟು, ದೋಷಾರೋಪಣೆಗಳಿಂದ ವಿಮುಕ್ತರನ್ನಾಗಿಸಿದೆ.

ಶ್ರೀ. ಕೆ.ಎಂ. ಮಕ್ಬೂಲ್, ನಿವೃತ್ತ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಅವರ ವಿರುದ್ಧ ಈ ಇಲಾಖಾ ವಿಚಾರಣೆಯನ್ನು ಹೂಡದಿದ್ದಲ್ಲಿ, ಯಾವ ಸವಲತ್ತುಗಳಿಗೆ ಅರ್ಹರಿರುತ್ತಿದ್ದರೋ, ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ. ಶ್ರೀನಿವಾಸನ್**

ಪಿ.ಆರ್. 248

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಬೆಂಗಳೂರು ಜಿಲ್ಲೆಯಲ್ಲಿನ ಕೆಲವು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿಎಸ್: ಆರ್‌ಡಿಎಸ್:ಮೇಲ್ದರ್ಜೆ:03-04, ದಿನಾಂಕ:17-12-2003.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಬೆಂಗಳೂರು ಜಿಲ್ಲೆಯ ಈ ಕೆಳಗೆ ವಿವರಿಸಿದ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಸಂಚಾರದ ಸಾಂದ್ರತೆಯನ್ನು ಸುಗಮಗೊಳಿಸುವ ಸಲುವಾಗಿ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

1) ಬೆಂಗಳೂರು ಜಿಲ್ಲೆಯ ಬೆಂಗಳೂರು ಹೊಸೂರು ರಾಷ್ಟ್ರೀಯ ಹೆದ್ದಾರಿ ರಸ್ತೆಯಿಂದ ಕೈಗೊಂಡನಹಳ್ಳಿಯ ಹತ್ತಿರ ಬೆಂಗಳೂರು ಸರ್ಜಾಪುರ ಸೇರುವ ವಯಾ ಮೈಕೋ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ, ನಾಗನಾಥಪುರ, ಬಸವನಪುರ ಕಾಲೋನಿ ಮತ್ತು ಕಸವನಹಳ್ಳಿ ಮಾರ್ಗವಾಗಿ ಹಾದು ಹೋಗುವ ರಸ್ತೆ (ಒಟ್ಟು ಉದ್ದ 7 ಕಿಮೀ)
2) ಬೆಂಗಳೂರು ಜಿಲ್ಲೆಯ ಎಲೆಕ್ಟ್ರಾನಿಕ್ಸ್ ಸಿಟಿಯಿಂದ ಬಸವನಪುರ ಹತ್ತಿರ ಬೆಂಗಳೂರು ಬನ್ನೇರುಘಟ್ಟ ಸೇರುವ ರಸ್ತೆ ಮಾರ್ಗ ನೀಲಾದ್ರಿ ವಾಟರ್ ಪಾರ್ಕ್, ಬೆಟ್ಟದಾಸನಪುರ ಹೊನ್ನದೇವನಹಳ್ಳಿ ಮತ್ತು ಬಸವನಪುರ ಬೇಗೂರು ಹೋಬಳಿ ರಸ್ತೆ (ಒಟ್ಟು ಉದ್ದ 12 ಕಿಮೀ)

**ಸರ್ಕಾರಿ ಆದೇಶ ಸಂಖ್ಯೆ: ಲೋಇ 05 ಸಿಎಸ್‌ಆರ್ 2003, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆ ಹಾಗೂ ಶಿಫಾರಸ್ಸುಗಳನ್ನು ಪರಿಶೀಲಿಸಿ ಈ ಕೆಳಕಂಡ 2 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1) ಬೆಂಗಳೂರು ಜಿಲ್ಲೆಯ ಬೆಂಗಳೂರು ಹೊಸೂರು ರಾಷ್ಟ್ರೀಯ ಹೆದ್ದಾರಿ ರಸ್ತೆಯಿಂದ ಕೈಗೊಂಡನಹಳ್ಳಿಯ ಹತ್ತಿರ ಬೆಂಗಳೂರು ಸರ್ಜಾಪುರ ಸೇರುವ ವಯಾ ಮೈಕೋ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ, ನಾಗನಾಥಪುರ, ಬಸವನಪುರ ಕಾಲೋನಿ ಮತ್ತು ಕಸವನಹಳ್ಳಿ ಮಾರ್ಗವಾಗಿ ಹಾದು ಹೋಗುವ ರಸ್ತೆ (ಒಟ್ಟು ಉದ್ದ 7 ಕಿಮೀ)

2) ಬೆಂಗಳೂರು ಜಿಲ್ಲೆಯ ಎಲೆಕ್ಟ್ರಾನಿಕ್ಸ್ ಸಿಟಿಯಿಂದ ಬಸವನಪುರ ಹತ್ತಿರ ಬೆಂಗಳೂರು ಬನ್ನೇರುಘಟ್ಟ ಸೇರುವ ರಸ್ತೆ ಮಾರ್ಗ ನೀಲಾದ್ರಿ ವಾಟರ್ ಪಾರ್ಕ್, ಬೆಟ್ಟದಾಸನಪುರ ಹೊನ್ನದೇವನಹಳ್ಳಿ ಮತ್ತು ಬಸವನಪುರ ಬೇಗೂರು ಹೋಬಳಿ ರಸ್ತೆ (ಒಟ್ಟು ಉದ್ದ 12 ಕಿಮೀ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 249

**ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. (ಸಂಪರ್ಕ)

**ವಿಷಯ:** ಕೊಡಗು ಜಿಲ್ಲೆಯಲ್ಲಿನ ಕೆಲವು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಸ್ತೆ ಶಾಖೆ:ಎಇ-7: ಕೊಡಗು:ಮೇಲ್ದರ್ಜೆ: 2003-04, ದಿನಾಂಕ:01-01-2004.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಸ್ತೆ ಶಾಖೆ:ಸಇಂ-7: ಕೊಡಗು:ಸೋಪೇಟೆ ಮೇಲ್ದರ್ಜೆ: 2003-04, ದಿನಾಂಕ:03-12-2003.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಈ ಕೆಳಗೆ ವಿವರಿಸಿದ ಹಳ್ಳಿಗಳ ಸರ್ವತೋಮುಖ ಅಭಿವೃದ್ಧಿಗೆ ಹಾಗೂ ಸಾರ್ವಜನಿಕರ ಸಂಚಾರದ ಮತ್ತು ಪ್ರವಾಸಿಗಳ ಹಿತದೃಷ್ಟಿಯಿಂದ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

1) ದೊಡ್ಡಮಳ್ತೆ-ಒಳಗುಂದ-ಅಬ್ಬೂರುಕಟ್ಟೆ ಗ್ರಾಮೀಣ ರಸ್ತೆ (ಒಟ್ಟು ಉದ್ದ 7.50 ಕಿಮೀ)
2) ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಕಬ್ಬಿಣ ಸೇತುವೆ ಕಿರಗಂದೂರು ರಸ್ತೆ (ಒಟ್ಟು ಉದ್ದ 5.00 ಕಿಮೀ)
3) ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಕೊಡಗಡ್ಡಿ ತಾಕೇರಿ ಗರ್ವಾಲೆ ರಸ್ತೆ ಸಂಪರ್ಕ ದುಡಿಮೆ ಹಳ್ಳಿಕ್ಕಾಗಿ ಬಗ್ಗನಮನೆ ಶಾಂತಳ್ಳಿ ಕುಕ್ಕೆ ಸುಬ್ರಹ್ಮಣ್ಯ ರಸ್ತೆ (ಒಟ್ಟು ಉದ್ದ 7.00 ಕಿಮೀ)

**ಸರ್ಕಾರಿ ಆದೇಶ ಸಂಖ್ಯೆ: ಲೋಇ 83 ಸಿಎಸ್ಆರ್ 2003, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆ ಹಾಗೂ ಶಿಫಾರಸ್ಸುಗಳನ್ನು ಪರಿಶೀಲಿಸಿ ಈ ಕೆಳಕಂಡ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1) ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ದೊಡ್ಡಮಳ್ತೆ-ಒಳಗುಂದ-ಅಬ್ಬೂರುಕಟ್ಟೆ ಗ್ರಾಮೀಣ ರಸ್ತೆ (ಒಟ್ಟು ಉದ್ದ 7.50 ಕಿಮೀ)
2) ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಕಬ್ಬಿಣ ಸೇತುವೆ ಕಿರಗಂದೂರು ರಸ್ತೆ (ಒಟ್ಟು ಉದ್ದ 5.00 ಕಿಮೀ)
3) ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಕೊಡಗಡ್ಡಿ ತಾಕೇರಿ ಗರ್ವಾಲೆ ರಸ್ತೆ ಸಂಪರ್ಕ ದುಡಿಮೆ ಹಳ್ಳಿಕ್ಕಾಗಿ ಬಗ್ಗನಮನೆ ಶಾಂತಳ್ಳಿ ಕುಕ್ಕೆ ಸುಬ್ರಹ್ಮಣ್ಯ ರಸ್ತೆ (ಒಟ್ಟು ಉದ್ದ 7.00 ಕಿಮೀ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 250

**ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. (ಸಂಪರ್ಕ)

## ENERGY SECRETARIAT

**Sub:** Own Your transformer Scheme for IP Sets in the State- Conversion of LT lines to 11 KV Lines.

**Read:** 1. G.O.No : DE 59 PSR 2003, dated : 21st October 2003.

**PREAMBLE** :

Government of Karnataka, upon the proposals from MD, KPTCL for rendering quality and reliable power supply to IP Set consumers in the State and to prevent unauthorised connection of irrigation pump sets to LT Secondaries, introduced the Own Your transformers Scheme for IP Set consumers with the following provisions.

1) To energise 60,000 new IP Set connections with a transformer for each connection, this year, on payment of Rs. 25,000 by each consumer, under "Own Your Transformer" Scheme.
2) To regularize unauthorized IP Set connections under "Own Your Transformer" Scheme. On payment of Rs. 35,000 by each consumer, for regularization.

During his reply to the debate on the budget 2004-05, the Chief Minister announced certain modifications in the OYT Scheme. Hence the following order:

**Government Order No : DE 59 PSR 2003, Bangalore, Dated : 26th February 2004**

In the circumstances explained in the preamble, Government are pleased to approve the following modification to the Govt. Order No. DE 59 PSR 2003 dated 21-10-2003:

1) For regularization of unauthorized IP Sets, the amount to be paid by the consumer will be Rs. 25,000/=, payable in three Installments:
   a) Rs. 8000/= immediately.
   b) Rs. 10,000/= after six months;
   c) Balance of Rs. 7,000/= after next six months. (i.e.; payable over one year)
2) For new IP Set Connections:
   a) Rs. 15,000/= to be paid immediately.
   b) Balance Rs. 10,000/=after six months.

By Order and in the name of the Governor of Karnataka,

P.R. 251

**K.L. JAYARAM**

Under Secretary to Government, Energy Department.

**Sub:** Budget of 2004-05 Implementation of Programmes / Schemes in the budget

**PREAMBLE** :

In the budget speech 2004-05, it was announced by Hon'ble Chief Minister on the floor of the Karnataka State Legislature on 05.02.2004 as follows;

"Recurrent drought has adversely affected the ground water table and thereby the yield from irrigation bore wells. It has also seriously eroded the ability of small and marginal farmers to meet input costs, in particular, the cost of electricity for irrigation pump sets. Recognizing their distress, my Government, like a true "Apath Bandhava", announces full waiver of Irrigation Pump set dues up to 31.03.2003 as a one time measure. This will provide a relief of about Rs.600 Crore"

Hence the following Order.

**Government Order No : EN 44 PSR 2004, Bangalore, Dated : 21st February 2004**

In the circumstances explained in the preamble, the Government are pleased to approve full waiver of Irrigation Pump set dues upto 31.03.2003 as a one time measure.

All the Electricity Supply Companies in the State and the Hukkeri Rural Electric Co-operative Society will take needful action to give effect to this Order and ensure issue of revised bills to the IP Set consumers in the State. This Order also applies to those IP Set consumers who have paid the outstanding dues as on 31.03.2003, on or after 01.04.2003. In the case of such consumers who have paid the dues after 01.04.2003, suitable adjustment will be made against the demand for 2003-04.

This Order comes into force with immediate effect.

By Order and in the name of the Governor of Karnataka,

P.R. 252

**K.L. JAYARAM**

Under Secretary to Government, Energy Department.

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ದಿನಾಂಕ: 24.10.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ), ದಿನಾಂಕ: 1.12.2003.
2. ಸರ್ಕಾರದ ಆದೇಶ ಸಂಖ್ಯೆ: ಅಪಜೀ 359 ಎಫ್‌ಜಿಎಲ್ 2003, ದಿನಾಂಕ: 6.1.2004.
3. ಮುಖ್ಯ ಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಸಿಎಂಪಿಎಸ್: 149/04, ದಿನಾಂಕ: 16.2.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 24.10.1980ರ ಪೂರ್ವದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಚಿಕ್ಕಮಗಳೂರು ತಾಲ್ಲೂಕು ಮಟ್ಟದ ಅಧ್ಯಕ್ಷರು ಮತ್ತು ಸದಸ್ಯರನ್ನು ನಾಮನಿರ್ದೇಶನ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಟಿಪ್ಪಣಿ ಸಂಖ್ಯೆ: 149/04, ದಿನಾಂಕ: 16.2.2004ರಲ್ಲಿ ಈ ಕೆಳಕಂಡವರನ್ನು ಅಧ್ಯಕ್ಷರು ಮತ್ತು ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲು ಆದೇಶಿಸಲಾಗಿದೆ.

| | | | |
|---|---|---|---|
| 1. | ಶ್ರೀ ಎ.ವಿ. ಬಸವರಾಜ್<br>ಹೌಸಿಂಗ್ ಬೋರ್ಡ್ ಬಡಾವಣೆ, 1ನೇ ಹಂತ, ಚಿಕ್ಕಮಗಳೂರು. | - | ಅಧ್ಯಕ್ಷರು. |
| 2. | ಶ್ರೀ ಎಸ್.ಜಿ. ಜಯಶೀಲ ಬಿನ್ ಶ್ರೀ ಜಿ.ಆರ್. ಜಯರಾಮೇಗೌಡ,<br>ಸಂಗಮೇಶ್ವರ ಪೇಟೆ ಅಂಚೆ, ಚಿಕ್ಕಮಗಳೂರು. | - | ಸದಸ್ಯರು |

| | | | |
|---|---|---|---|
| 3. | ಕುಮಾರಿ ಚಂದ್ರಮ್ಮ ಬಿನ್ ಪುಟ್ಟಸ್ವಾಮಿ,<br>ಕುರುವಂಗಿ ಅಂಚೆ, ಚಿಕ್ಕಮಗಳೂರು. | - | ಸದಸ್ಯರು |
| 4. | ಶ್ರೀ ಕೆ. ಅಬ್ದುಲ್ ಶಕೀಲ್, ಬಿನ್ ಅಬ್ದುಲ್ ಘನಿ,<br>ನೂರಾನಿ ಮಸ್ಜದ್ ರಸ್ತೆ, ಗೌರಿಕಾಲುವೆ, ಚಿಕ್ಕಮಗಳೂರು. | - | ಸದಸ್ಯರು |

ಅದರಂತೆ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ಮಾಡಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 359 ಎಫ್‌ಜಿಎಲ್ 2003, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ದಿನಾಂಕ: 1.12.2003 ರಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ಚಿಕ್ಕಮಗಳೂರು ತಾಲ್ಲೂಕಿಗೆ ಸಂಬಂಧಿಸಿದಂತೆ, ಸರ್ಕಾರದ ಆದೇಶ ಸಂಖ್ಯೆ: ಅಪಜೀ 359 ಎಫ್‌ಜಿಎಲ್ 2003, ದಿನಾಂಕ: 6-1-2004 ರಲ್ಲಿ ಚಿಕ್ಕಮಗಳೂರು ತಾಲ್ಲೂಕಿಗೆ ಸಂಬಂಧಿಸಿದಂತೆ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರ ನೇಮಕ ಮಾಡಿರುವುದನ್ನು ಈ ಮೂಲಕ ರದ್ದುಪಡಿಸಲಾಗಿದೆ ಮತ್ತು ಸದರಿ ಸಮಿತಿಗೆ ಕೆಳಕಂಡ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

| | | | |
|---|---|---|---|
| 1. | ಶ್ರೀ ಎ.ಎ. ಬಸವರಾಜ್<br>ಹೌಸಿಂಗ್ ಬೋರ್ಡ್ ಬಡಾವಣೆ, 1ನೇ ಹಂತ, ಚಿಕ್ಕಮಗಳೂರು. | - | ಅಧ್ಯಕ್ಷರು. |
| 2. | ಶ್ರೀ ಎಸ್.ಜಿ. ಜಯಶೀಲ ಬಿನ್ ಶ್ರೀ ಜಿ.ಆರ್. ಜಯರಾಮೇಗೌಡ,<br>ಸಂಗಮೇಶ್ವರ ಪೇಟೆ ಅಂಚೆ, ಚಿಕ್ಕಮಗಳೂರು. | - | ಸದಸ್ಯರು |
| 3. | ಕುಮಾರಿ ಚಂದ್ರಮ್ಮ ಬಿನ್ ಪುಟ್ಟಸ್ವಾಮಿ,<br>ಕುರುವಂಗಿ ಅಂಚೆ, ಚಿಕ್ಕಮಗಳೂರು. | - | ಸದಸ್ಯರು |
| 4. | ಶ್ರೀ ಕೆ. ಅಬ್ದುಲ್ ಶಕೀಲ್, ಬಿನ್ ಅಬ್ದುಲ್ ಘನಿ,<br>ನೂರಾನಿ ಮಸ್ಜದ್ ರಸ್ತೆ, ಗೌರಿಕಾಲುವೆ, ಚಿಕ್ಕಮಗಳೂರು. | - | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 253 **ಎಸ್. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ವಿಷಯ:** ದಿನಾಂಕ: 24.10.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ), ದಿನಾಂಕ: 1.12.2003.
2. ಸರ್ಕಾರದ ಆದೇಶ ಸಂಖ್ಯೆ: ಅಪಜೀ 359 ಎಫ್‌ಜಿಎಲ್ 2003, ದಿನಾಂಕ: 6.1.2004.
3. ಮುಖ್ಯ ಮಂತ್ರಿಯವರ ಸಚಿವಾಲಯ ಟಿಪ್ಪಣಿ ಸಂಖ್ಯೆ: CM/MIN/187/2004, ದಿನಾಂಕ: 27.1.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 24.10.1980ರ ಪೂರ್ವದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಭದ್ರಾವತಿ ತಾಲ್ಲೂಕು ಮಟ್ಟದ ಅಧ್ಯಕ್ಷರು ಮತ್ತು ಸದಸ್ಯರನ್ನು ನಾಮನಿರ್ದೇಶನ ಮಾಡಲಾಗಿತ್ತು.

ಮೇಲೆ ಓದಲಾದ ಟಿಪ್ಪಣಿ ಸಂಖ್ಯೆ: CM/MIN/187/2004, ದಿನಾಂಕ: 27.1.2004ರಲ್ಲಿ ಈ ಕೆಳಕಂಡವರನ್ನು ಅಧ್ಯಕ್ಷರು ಮತ್ತು ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲು ಆದೇಶಿಸಲಾಗಿದೆ.

| | | | |
|---|---|---|---|
| 1. | ಶ್ರೀ ಬಸವರಾಜ್, ಡಿ.ಬಿ. ಹಳ್ಳಿ, ಭದ್ರಾವತಿ ತಾಲ್ಲೂಕು. | - | ಅಧ್ಯಕ್ಷರು. |
| 2. | ಶ್ರೀ ಕೆ. ಕರಿಯಪ್ಪ ಬಿನ್ ಕರಿಗೌಡ್ರು,<br>ಹೆಚ್.ಎಲ್.ಸಿ. 36:ಡಿ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | - | ಸದಸ್ಯರು |
| 3. | ಶ್ರೀ ಶಾಮಮೂರ್ತಿ ಬಿನ್ ಸಿದ್ದಯ್ಯ<br>2ನೇ ರಸ್ತೆ, ಕೆ.ಸಿ.ಬ್ಲಾಕ್, ಜನ್ನಾಪುರ, ಭದ್ರಾವತಿ ನಗರ,<br>ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | - | ಸದಸ್ಯರು |
| 4. | ಶ್ರೀಮತಿ ನಾಗರತ್ನಮ್ಮ<br>ರತ್ನಪುರ ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | - | ಸದಸ್ಯರು |

ಅದರಂತೆ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ಮಾಡಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 28 ಎಫ್‌ಜಿಎಲ್ 2004, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ದಿನಾಂಕ: 1.12.2003 ರಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ಭದ್ರಾವತಿ ತಾಲ್ಲೂಕಿಗೆ ಸಂಬಂಧಿಸಿದಂತೆ, ಸರ್ಕಾರದ ಆದೇಶ ಸಂಖ್ಯೆ: ಅಪಜೀ 359 ಎಫ್‌ಜಿಎಲ್ 2003, ದಿನಾಂಕ: 6-1-2004 ರಲ್ಲಿ ಭದ್ರಾವತಿ ತಾಲ್ಲೂಕಿಗೆ ಸಂಬಂಧಿಸಿದಂತೆ

ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರ ನೇಮಕ ಮಾಡಿರುವುದನ್ನು ಈ ಮೂಲಕ ರದ್ದುಪಡಿಸಲಾಗಿದೆ ಮತ್ತು ಸದರಿ ಸಮಿತಿಗೆ ಕೆಳಕಂಡ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

| | | | |
|---|---|---|---|
| 1. | ಶ್ರೀ ಬಸವರಾಜ್, ಡಿ.ಬಿ. ಹಳ್ಳಿ, ಭದ್ರಾವತಿ ತಾಲ್ಲೂಕು. | - | ಅಧ್ಯಕ್ಷರು. |
| 2. | ಶ್ರೀ ಕೆ. ಕರಿಯಪ್ಪ ಬಿನ್ ಕರಿಗೌಡ್ರು,<br>ಹೆಚ್.ಎಲ್.ಸಿ. 36:ಡಿ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | - | ಸದಸ್ಯರು |
| 3. | ಶ್ರೀ ಶಾಮಮೂರ್ತಿ ಬಿನ್ ಸಿದ್ದಯ್ಯ<br>2ನೇ ರಸ್ತೆ, ಕೆ.ಸಿ.ಬ್ಲಾಕ್, ಜನ್ನಾಪುರ, ಭದ್ರಾವತಿ ನಗರ,<br>ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | - | ಸದಸ್ಯರು |
| 4. | ಶ್ರೀಮತಿ ನಾಗರತ್ನಮ್ಮ<br>ರತ್ನಪುರ ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | - | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 254

**ಎಸ್. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ವಿಷಯ:** ದಿನಾಂಕ: 24.10.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ), ದಿನಾಂಕ: 1.12.2003.
2. ಮುಖ್ಯ ಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಸಿಎಂಪಿಎಸ್:67/04, ದಿನಾಂಕ: 6.2.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 24.10.1980ರ ಪೂರ್ವದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ. ಕನಕಪುರ ತಾಲ್ಲೂಕು ಮಟ್ಟದ ಸಮಿತಿಗೆ ನಾಮ ನಿರ್ದೇಶನ ಮಾಡಲು ಅಧ್ಯಕ್ಷರು ಮತ್ತು ಸದಸ್ಯರ ಹೆಸರುಗಳನ್ನು ಮೇಲೆ ಓದಲಾದ ಉಲ್ಲೇಖ (2)ರ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

ಅದರಂತೆ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ಮಾಡಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 357 ಎಫ್‌ಜಿಎಲ್ 2003, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ದಿನಾಂಕ: 1.12.2003 ರಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ಕನಕಪುರ ತಾಲ್ಲೂಕಿಗೆ ಸಂಬಂಧಿಸಿದಂತೆ ಕೆಳಕಂಡ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

| | | |
|---|---|---|
| 1. | **ಕನಕಪುರ ತಾಲ್ಲೂಕು**<br>**ಶ್ರೀಮತಿ:ಶ್ರೀ** | |
| 1. | ಹೆಚ್.ಎಂ. ರಾಮಸ್ವಾಮಿ,<br>ಹೂಕುಂದ, ಉಯ್ಯಂಬಳ್ಳಿ ಹೋಬಳಿ, ಕನಕಪುರ ತಾಲ್ಲೂಕು. | ಅಧ್ಯಕ್ಷರು. |
| 2. | ಶಿವಕುಮಾರ್ ಬಿನ್ ಕೆಂಪಯ್ಯ, ದೊಡ್ಡಹಾಲಹಳ್ಳಿ,<br>ಉಯ್ಯಂಬಳ್ಳಿ ಹೋಬಳಿ, ಕನಕಪುರ ತಾಲ್ಲೂಕು | ಸದಸ್ಯರು |
| 3. | ರಾಮಮ್ಮ, ಇರ್‍ಲಪೋಡು, ಕೋಡಿಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು. | ಸದಸ್ಯರು |
| 4. | ರಾಜಕುಮಾರ ಬಿನ್ ವರದಪ್ಪ ಮುನಿನಗರ,<br>ಹಾರೋಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 255

**ಎಸ್. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ:** ಹೂಕುಂದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಹೂಕುಂದ, ಕನಕಪುರ ತಾಲ್ಲೂಕು ಇವರ ವಿಶೇಷಾಧಿಕಾರಿಯ ಅವಧಿಯನ್ನು ಪ್ರಕರಣ 121ರ ಅನ್ವಯ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಜಂಟಿ ನಿಬಂಧಕರು(ಪತ್ತು) ಇವರ ಪತ್ರ ಸಂಖ್ಯೆ:ಸಿಆರ್‌ಡಿ:ಕೆಎಂಈ:8/53/2003-04, ದಿನಾಂಕ: 5.2.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನ ಹೂಕುಂದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಕನಕಪುರ ಈ ಸಂಘದ ಐದು ಜನ ನಿರ್ದೇಶಕರು ಅನರ್ಹಗೊಂಡು ಶೂನ್ಯ ಉಂಟಾಗಿದ್ದ ಪ್ರಯುಕ್ತ ಈ ಸಂಘದ ಕಾರ್ಯ ಕಲಾಪಗಳನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ಅನುಕೂಲವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರನ್ವಯ ದಿನಾಂಕ: 21.2.2000ದ ಆದೇಶದ ಪ್ರಕಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರಂ ಇವರನ್ನು ವಿಶೇಷ ಅಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅನರ್ಹತೆಗೊಂಡ ಐದು ಜನರು ತಮ್ಮ ಅನರ್ಹತೆಯನ್ನು ಪ್ರಶ್ನಿಸಿ ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಸಲ್ಲಿಸಲಾಗಿದ್ದ ರಿಟ್ ಅರ್ಜಿ ಸಂಖ್ಯೆ: 9729-9733-/2000 ರಲ್ಲಿ ನ್ಯಾಯಾಲಯವು ಅನರ್ಹತೆ ಆದೇಶವನ್ನು ವಜಾ ಮಾಡಿರುತ್ತದೆ. ಸದರಿ ತೀರ್ಪಿನ ವಿರುದ್ಧ ರಿಟ್ ಅಪೀಲು ಸಂಖ್ಯೆ 3616-20/2002 ಅನ್ನು ಸಲ್ಲಿಸಿದ್ದು ಸದರಿ ರಿಟ್ ಅಪೀಲಿನಲ್ಲಿ ನ್ಯಾಯಾಲಯವು ಯಥಾಸ್ಥಿತಿಯನ್ನು ಮುಂದುವರೆಸುವಂತೆ ಆದೇಶಿಸಿದ ಪರಿಣಾಮವಾಗಿ ವಿಶೇಷಾಧಿಕಾರಿಯವರು ಮುಂದುವರೆಯುತ್ತಿದ್ದಾರೆ. ಆದ್ದರಿಂದ ಕನಕಪುರ ತಾಲ್ಲೂಕಿನ ಹೂಕುಂದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಕನಕಪುರ ಇದರ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ:21.8.2000 ರಿಂದ ನ್ಯಾಯಾಲಯದಲ್ಲಿರುವ ರಿಟ್ ಅಪೀಲು ತೀರ್ಮಾನವಾಗುವವರೆಗೆ ಮುಂದುವರೆಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ವಿಶೇಷ ಪ್ರಕರಣವೆಂದು ಪರಿಗಣಿಸಿ ವಿಶೇಷಾಧಿಕಾರಿಯವರ ಅವಧಿಯನ್ನು ವಿಸ್ತರಿಸಬೇಕೆಂದು ಕೋರಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿದ್ದಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 33 ಸಿಎಲ್ಎಂ 2004, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ 121ನೇ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 31(1) ಅನ್ನು ಭಾಗಶಃ ಮಾರ್ಪಡಿಸಿ ಹೂಕುಂದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಹೂಕುಂದ, ಕನಕಪುರ ತಾಲ್ಲೂಕು ಇದರ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ: 30.9.2004 ರವರೆಗೆ ವಿಸ್ತರಿಸಲಾಗಿದೆ. ಸದರಿ ಅವಧಿಯೊಳಗೆ ನ್ಯಾಯಾಲಯದ ತಡೆಯಾಜ್ಞೆಯನ್ನು ತೆರವುಗೊಳಿಸಿ ಆಡಳಿತ ಮಂಡಳಿಗೆ ಚುನಾವಣೆಯನ್ನು ನಡೆಸತಕ್ಕದ್ದು.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ಕ್ಕೆ ಮಾಡಿರುವ ಈ ಮಾರ್ಪಾಟು ದಿನಾಂಕ: 30.9.2004ರ ವರೆಗೆ ಜಾರಿಯಲ್ಲಿರುತ್ತದೆ. ಈ ಅವಧಿ ಮುಗಿದ ನಂತರ ಈ ಮಾರ್ಪಾಡಿಗೆ ಮೊದಲು ಇದ್ದಂತೆ ಪ್ರಕರಣ 31(1)ರ ಉಪ ಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 256

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಚಿತ್ರದುರ್ಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಚಿತ್ರದುರ್ಗ ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 21-11-2003 ರಿಂದ 6 ತಿಂಗಳ ಅವಧಿಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಆರ್‌ಡಿ:ಸಿಎಬಿ:1:113:2000-01, ದಿನಾಂಕ: 27.11.2003.

**ಪ್ರಸ್ತಾವನೆ:**

ಸಹಕಾರ ಸಂಘಗಳ ನಿಬಂಧಕರು, ಚಿತ್ರದುರ್ಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಚಿತ್ರದುರ್ಗ ಇದರ ಆಡಳಿತಗಾರರ ಅವಧಿಯು ದಿನಾಂಕ: 20-11-2003 ರಂದು ಮುಕ್ತಾಯವಾಗಿದ್ದು ಸದರಿ ಅವಧಿಯನ್ನು ದಿನಾಂಕ: 21-11-2003 ರಿಂದ ಇನ್ನೂ 6 ತಿಂಗಳವರೆಗೆ ವಿಸ್ತರಿಸಲು ಅನುಕೂಲವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 30(1)ಕ್ಕೆ ಸೂಕ್ತ ತಿದ್ದುಪಡಿ ಮಾಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಸಂಘದ ಆಡಳಿತಗಾರರ ಅವಧಿಯನ್ನು ವಿಸ್ತರಿಸಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 17 ಸಿಎಲ್ಎಂ 2004, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2004**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ 121ನೇ ಪ್ರಕರಣದಡಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ರಡಿ ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಚಿತ್ರದುರ್ಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್., ಚಿತ್ರದುರ್ಗ ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ, ಎಂದರೆ,

**30ರ ಪ್ರಕರಣದಲ್ಲಿ:**

(1)ನೇ ಉಪಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ಮೂರು ವರ್ಷ ಆರು ತಿಂಗಳು" ಎಂಬುದಾಗಿ ಸೇರಿಸತಕ್ಕದ್ದು.

ಸೂಚನೆ: 30(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 20-05-2004ರ ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 30(1) ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 257 **ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀ ಬಿ.ಹೆಚ್. ಉದಯಕುಮಾರ್, ಪದವೀಧರ ಇಂಜಿನಿಯರ್ (ಎಂ.ಆರ್ಇ) ಇವರು ದಿನಾಂಕ 1.9.2002ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 357 ಪಿಡಬ್ಲ್ಯುಸಿ 90 ದಿನಾಂಕಃ 2.12.94.
3. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯುಡಿ 201 ಪಿಡಬ್ಲ್ಯುಸಿ 95 ದಿ: 2.7.94, 1.9.95 ಹಾಗೂ13.9.95
4. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 32 ಪಿಡಬ್ಲ್ಯುಸಿ 95 ದಿನಾಂಕ 10.7.96.
5. ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಗ್ರಾಇಂಇ:ಸಿ–14(ಎ):ಮಾವೇಸಿ:ಸಕ್ರಮಃ2003–04:6715: ದಿನಾಂಕಃ 3.1.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (5) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 32 ಪಿಡಬ್ಲ್ಯುಸಿ 95 ದಿನಾಂಕ 10.7.96ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

### ಆದೇಶ

### ಸರ್ಕಾರಿ ಆದೇಶ ಸಂಖ್ಯೆ: ಲೋಇ 2 ಪಿಡಬ್ಲ್ಯುಸಿ 2004 ಬೆಂಗಳೂರು ದಿನಾಂಕ: 21ನೇ ಫೆಬ್ರವರಿ 2004

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 32 ಪಿಡಬ್ಲ್ಯುಸಿ 95 ದಿನಾಂಕ 10.7.96ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧ ಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಬಿ.ಹೆಚ್. ಉದಯಕುಮಾರ್ ಪದವೀಧರ ಇಂಜಿನಿಯರ್ | 1.9.92 | 31.8.2002 | 1.9.2002 | ಯಾಂತ್ರಿಕ ಉಪ–ವಿಭಾಗ, ಗುಲ್ಬರ್ಗಾ |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 258

**ಎಸ್. ಚಂದ್ರಶೇಖರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ(ಸೇವೆಗಳು–ಸಿ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** 1. ಎಂ. ತ್ಯಾಗರಾಜ್, ಸಹಾಯಕ ನಿಯಂತ್ರಕರು, (2) ಚನ್ನಕೇಶವೇಗೌಡ, ಲೆಕ್ಕಪತ್ರ ಅಧೀಕ್ಷಕರು, (3) ಬಿ. ಶಿವಣ್ಣ, ಲೆಕ್ಕಾಧಿಕಾರಿ, (4) ಎಂ. ಕೃಷ್ಣಪ್ಪ, ಲೆಕ್ಕ ಪರಿಶೋಧನಾಧಿಕಾರಿ, (5) ನಾರಾಯಣಪ್ಪ ಲೆಕ್ಕಪತ್ರ ಅಧೀಕ್ಷಕರು, (6) ಬಿ. ಚಿಕ್ಕ ತಿಮ್ಮಯ್ಯ, ಲೆಕ್ಕ ಪರಿಶೋಧನಾಧಿಕಾರಿ, (7) ಎಸ್.ಸಿ. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ, (8) ಲಕ್ಕಪ್ಪ, ಲೆಕ್ಕ ಪರಿಶೋಧನಾಧಿಕಾರಿ, (9) ಎಂ. ಗಿರಿಗೌಡ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ, (10) ಸಿ.ಎಲ್. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ, (11) ಎನ್.ವಿ. ಮೃತ್ಯುಂಜಯ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ, (12) ಹೆಚ್.ಎಂ. ಮಂಜುನಾಥ, ದ್ವಿತೀಯ ದರ್ಜೆ ಸಹಾಯಕ, (13) ಎನ್. ಶ್ರೀನಿವಾಸಯ್ಯ, ದ್ವಿತೀಯ ದರ್ಜೆ ಸಹಾಯಕ, (14) ಬೈರಪ್ಪ, ದ್ವಿತೀಯ ದರ್ಜೆ ಸಹಾಯಕ, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 84 ಎಸ್‌ಇಎನ್ 2000, ದಿನಾಂಕ: 30-10-2000.
2. ಎಂ. ತ್ಯಾಗರಾಜ, ಸಹಾಯಕ ನಿಯಂತ್ರಕರು, (ದಿನಾಂಕ:17-2-2001) ಚನ್ನಕೇಶವೇಗೌಡ, ಲೆಕ್ಕಪತ್ರ ಅಧೀಕ್ಷಕರು (ದಿನಾಂಕ:02-03-2001) ಬಿ. ಶಿವಣ್ಣ, ಲೆಕ್ಕಾಧಿಕಾರಿ, (ದಿನಾಂಕ:17-02-2001), ಎಂ. ಕೃಷ್ಣಪ್ಪ, ಲೆಕ್ಕ ಪರಿಶೋಧನಾಧಿಕಾರಿ, (ದಿನಾಂಕ:08-12-2000), ಎಸ್.ಸಿ. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕರು, (ದಿನಾಂಕ:11-12-2000), ಇವರುಗಳ ಉತ್ತರಗಳು.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಇಂಜಿನೀಯರಿಂಗ್ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅಂದಿನ ಎಕ್ಸಿಕ್ಯೂಟೀವ್ ಇಂಜಿನಿಯರ್‌ರೊಡನೆ ಷಾಮೀಲಾಗಿ ಕೇಂದ್ರ ಪುರಸ್ಕೃತ ನೀರು ಸರಬರಾಜು ಯೋಜನೆಯಡಿ ಹಂಚಿಕೆಯಾದ ಅನುದಾನದಲ್ಲಿ ರೂ. 52,89,740-00ಗಳ ಮೊತ್ತವನ್ನು ರಾಜ್ಯವಲಯದ ನೀರು ಪೂರೈಕೆ ಯೋಜನೆ ಮತ್ತು ದಾಸ್ತಾನು ಖರೀದಿಗೆ ಸರ್ಕಾರದ ಸೂಚನೆಗಳನ್ನು ಉಲ್ಲಂಘಿಸಿ ವೆಚ್ಚ ಮಾಡಿದ ಆರೋಪಕ್ಕಾಗಿ 1) ಎಂ. ತ್ಯಾಗರಾಜ್, ಸಹಾಯಕ ನಿಯಂತ್ರಕರು, 2) ಚನ್ನಕೇಶವೇಗೌಡ ಲೆಕ್ಕಪತ್ರ ಅಧೀಕ್ಷಕರು, 3) ಬಿ. ಶಿವಣ್ಣ, ಲೆಕ್ಕಾಧಿಕಾರಿ, 4) ಎಂ. ಕೃಷ್ಣಪ್ಪ, ಲೆಕ್ಕಪರಿಶೋಧನಾಕಾರಿ, 5) ನಾರಾಯಣಪ್ಪ, ಲೆಕ್ಕಪತ್ರ ಅಧೀಕ್ಷಕರು, 6) ಬಿ. ಚಿಕ್ಕತಿಮ್ಮಯ್ಯ ಲೆಕ್ಕ ಪರಿಶೋಧನಾಧಿಕಾರಿ, 7) ಎಸ್.ಸಿ. ನಾರಾಯಣ, ಪ್ರಥಮ ದರ್ಜೆ ಲೆಕ್ಕ ಪತ್ರ ಸಹಾಯಕ, 8) ಲಕ್ಕಪ್ಪ, ಲೆಕ್ಕ ಪರಿಶೋಧನಾಧಿಕಾರಿ 9) ಎಂ. ಗಿರಿಗೌಡ, ಪ್ರಥಮ ದರ್ಜೆ ಲೆಕ್ಕ ಪತ್ರ, ಸಹಾಯಕ, 10) ಸಿ.ಎಂ. ನಾರಾಯಣ, ಪ್ರಥಮ ದರ್ಜೆ ಲೆಕ್ಕ ಪತ್ರ ಸಹಾಯಕ, 11) ಎನ್.ವಿ. ಮೃತ್ಯುಂಜಯ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ, 12) ಹೆಚ್.ಎಂ. ಮಂಜುನಾಥ ದ್ವಿತೀಯ ದರ್ಜೆ ಸಹಾಯಕ, 13) ಎಸ್. ಶ್ರೀನಿವಾಸಯ್ಯ, ದ್ವಿತೀಯ ದರ್ಜೆ ಸಹಾಯಕ, 14) ಬೈರಪ್ಪ, ದ್ವಿತೀಯ ದರ್ಜೆ ಸಹಾಯಕರವರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 30-10-2000ದ ನೋಟೀಸ್ ಜಾರಿ ಮಾಡುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸ್‌ಗೆ ಆರೋಪಿ ಅಧಿಕಾರಿ:ನೌಕರರು ಮೇಲೆ (2)ರಲ್ಲಿ ಓದಲಾದ ವಿವಿಧ ದಿನಾಂಕಗಳ ಉತ್ತರ ಸಲ್ಲಿಸಿ ಆರೋಪಗಳನ್ನು ನಿರಾಕರಿಸಿದ್ದಾರೆ.

ಆರೋಪಿತ ಅಧಿಕಾರಿ:ನೌಕರರ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿಲ್ಲದಿರುವುದರಿಂದ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

### ಆದೇಶ ಸಂಖ್ಯೆ:ಸಿಆಸುಇ 84 ಎಸ್‌ಇಎನ್ 2000, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು

1. ಎಂ. ತ್ಯಾಗರಾಜ್, ಸಹಾಯಕ ನಿಯಂತ್ರಕರು,
2. ಚನ್ನಕೇಶವೇಗೌಡ, ಲೆಕ್ಕಪತ್ರ ಅಧೀಕ್ಷಕರು,
3. ಬಿ. ಶಿವಣ್ಣ, ಲೆಕ್ಕಾಧಿಕಾರಿ,
4. ಎಂ. ಕೃಷ್ಣಪ್ಪ, ಲೆಕ್ಕ ಪರಿಶೋಧನಾಧಿಕಾರಿ,
5. ಸಿ. ನಾರಾಯಣಪ್ಪ, ಲೆಕ್ಕಪತ್ರ ಅಧೀಕ್ಷಕರು,

6. ಬಿ. ಚಿಕ್ಕ ತಿಮ್ಮಯ್ಯ, ಲೆಕ್ಕ ಪರಿಶೋಧನಾಧಿಕಾರಿ,
7. ಎಸ್.ಸಿ. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ,
8. ಲಕ್ಕಪ್ಪ, ಲೆಕ್ಕ ಪರಿಶೋಧನಾಧಿಕಾರಿ,
9. ಎಂ. ಗಿರಿಗೌಡ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ,
10. ಸಿ.ಎಲ್. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ,
11. ಎನ್.ವಿ. ಮೃತ್ಯುಂಜಯ, ಪ್ರಥಮ ದರ್ಜೆ, ಲೆಕ್ಕಪತ್ರ ಸಹಾಯಕ,
12. ಹೆಚ್.ಎಂ. ಮಂಜುನಾಥ, ದ್ವಿತೀಯ ದರ್ಜೆ ಸಹಾಯಕ,
13. ಎಸ್. ಶ್ರೀನಿವಾಸಯ್ಯ, ದ್ವಿತೀಯ ದರ್ಜೆ ಸಹಾಯಕ,
14. ಭೈರಪ್ಪ, ದ್ವಿತೀಯ ದರ್ಜೆ ಸಹಾಯಕ.

ಇವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಎಕ್ಸಿಕ್ಯೂಟೀವ್ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಉಳಿದ ನಿಬಂಧನೆಗಳು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 84 ಎಸ್‌ಇಎನ್ 2000 (1), ದಿನಾಂಕ: 21-2-2004ರಲ್ಲಿರುವಂತೆಯೇ ಇದಕ್ಕೂ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 259

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶದಲ್ಲಿನ 7 ನಗರಸಭೆಗಳು ಮತ್ತು 1 ಪುರಸಭೆಗೆ ಸಂಚಿತ ಹಣಕಾಸಿನ ಚೌಕಟ್ಟಿನೊಂದಿಗೆ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆ ಅಡಿಯ ಬಳಕೆದಾರರ ವಂತಿಗೆ ಸಂಗ್ರಹ ಕುರಿತು - ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ.ನಅಇ 27 ಎಂಎನ್‌ಐ 2000, ದಿನಾಂಕ.26–12–2003.

2. ಯೋಜನಾ ಚಾಲನಾ ಸಮಿತಿಯ ದಿನಾಂಕ.28–1–2004ರ ಸಭೆಯ ನಡವಳಿಗಳು.

**ಪ್ರಸ್ತಾವನೆ:-**

ಓದಲಾದ(1)ರ ಸರ್ಕಾರದ ದಿನಾಂಕ.26–12–2003ರ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವಂತಹ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರ, ರಾಜರಾಜೇಶ್ವರಿನಗರ ಮತ್ತು ಯಲಹಂಕ ಈ ಏಳು ನಗರ ಸಭೆಗಳು ಮತ್ತು ಕೆಂಗೇರಿ ಪಟ್ಟಣ ಪುರಸಭೆಗೆ ರೂ.658.64 ಕೋಟಿ ಒಟ್ಟು ಆದಾಯ ವೆಚ್ಚದಲ್ಲಿ ನೀರು ಪೂರೈಕೆ ಹಾಗೂ ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಮೇಲ್ಕಂಡ ಆದೇಶದಂತೆ ಈ ಯೋಜನೆಯಲ್ಲಿ ಪಾಲ್ಗೊಳುವ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ಎಲ್ಲ ಗೃಹ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.8,500–00ರಂತೆ ಮತ್ತು ಗೃಹೇತರ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.17,000–00 ಗಳಂತೆ ಒಂದು ಬಾರಿಯ ಬಂಡವಾಳ ವಂತಿಗೆಯನ್ನು ಸಂಗ್ರಹಿಸಲು ಸೂಚಿಸಲಾಗಿದೆ. ಈ ವಂತಿಗೆಯ ಮೊತ್ತವು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ವಿಧಿಸುವ ಮಾರ್ಗ ಮತ್ತು ಸಂಪರ್ಕ ವೆಚ್ಚಗಳ ಹಾಗೂ ಸ್ವತ್ತಿನ ಮಾಲೀಕರು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂದಾಯ ಮಾಡಬೇಕಾದ ರಸ್ತೆ ಅಗೆಯುವ ವೆಚ್ಚಗಳು ಸೇರಿರುವುದಿಲ್ಲ.

ಈ ಯೋಜನೆಯನ್ನು ಶೀಘ್ರವಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ಯೋಜನೆಯ ಚಾಲನಾ ಸಮಿತಿಯು 28–1–2004ರ ಸಭೆಯಲ್ಲಿ ಈ ಯೋಜನೆ ಕುರಿತು ಸಂಬಂಧಿಸಿದ ಸ್ಥಳೀಯ ನಗರಸಭೆಗಳ ಪ್ರತಿನಿಧಿಗಳನ್ನೊಳಗೊಂಡಂತೆ ಸದಸ್ಯರು ಫಲಾನುಭವಿ ಬಂಡವಾಳ ವಂತಿಕೆ ಕುರಿತು ನೀಡಿದ ಅಭಿಪ್ರಾಯವನ್ನು ಮತ್ತು ಸಲಹೆಗಳನ್ನು ಪರಿಶೀಲಿಸಲಾಗಿದೆ. ಕೂಲಂಕುಷವಾಗಿ ಚರ್ಚಿಸಿ ವಿವಿಧ ಅಳತೆ ಮತ್ತು ಮಾದರಿಯ ಆಸ್ತಿಗಳಿಗೆ ಪ್ರತ್ಯೇಕವಾಗಿ ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಪಾವತಿಸಬೇಕಾದ ಶುಲ್ಕ ಹೊರತುಪಡಿಸಿ ಉಳಿದ ಎಲ್ಲಾ ವೆಚ್ಚಗಳನ್ನು ಸೇರಿದಂತೆ ವಿಧಿಸಬಹುದಾದ ವಂತಿಗೆಯ ದರವನ್ನು ನಿಗದಿಪಡಿಸಿ ವಂತಿಕೆ ದರವನ್ನು ಪರಿಷ್ಕರಿಸುವುದು ಸೂಕ್ತವೆಂದು, ಹಾಗೂ ದೊಡ್ಡ ದೊಡ್ಡ ಆಸ್ತಿಗಳಿಗೆ ಹೆಚ್ಚಿನ ದರ ಹಾಗೂ ಸಣ್ಣ ಸಣ್ಣ ಆಸ್ತಿಗಳಿಗೆ ಕಡಿಮೆ ದರದ ವಂತಿಕೆ ನಿಗದಿಪಡಿಸತಕ್ಕದ್ದೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ವಿವಿಧ ವಂತಿಕೆಯ ಶುಲ್ಕಗಳ ವಿನ್ಯಾಸವನ್ನು ಪರಿಷ್ಕರಿಸಲು ಅನುಮೋದನೆ ನೀಡಿರುತ್ತದೆ.

| ಕ್ರ. ಸಂ. | ನಿವೇಶನ / ಫ್ಲಾಟ್ ವಿಸ್ತೀರ್ಣ | ದಿನಾಂಕ.31-7-2004 ರೊಳಗಾಗಿ ಬಳಕೆದಾರರಿಂದ ಸಂಗ್ರಹಿಸಬೇಕಾದ ವಂತಿಗೆಯ ದರ | ದಿನಾಂಕ.31-7-2004 ರೊಳಗಾಗಿ ಬಳಕೆದಾರರಿಂದ ವಂತಿಗೆಯನ್ನು ಪಾವತಿಸದಿದ್ದಲ್ಲಿ ಸಂಗ್ರಹಿಸಬೇಕಾದ ವಂತಿಗೆಯ ಮೊತ್ತ |
|---|---|---|---|
| **ಎ. ಗೃಹ ಬಳಕೆಯ ಆಸ್ತಿಗಳಿಗೆ** | | | |
| 01 | 40x60 ಅಡಿ ಆಳತೆ ಮತ್ತು ಅದಕ್ಕಿಂತ ಕಡಿಮೆ ಅಳತೆಯ ನಿವೇಶನ ಆಸ್ತಿಗಳಿಗೆ | ರೂ.10,000/- | ರೂ.15,000/- |
| 02 | 40x60 ಅಡಿ ಅಳತೆಗಿಂತ ಹೆಚ್ಚು ಅಳತೆಯ ನಿವೇಶನ ಆಸ್ತಿಗಳಿಗೆ | ರೂ.15,000/- | ರೂ.20,000/- |
| 03 | 1200 ಚ.ಅ ವಿಸ್ತೀರ್ಣದ ಫ್ಲಾಟ್‌ಗಳಿಗೆ | ರೂ.10,000/- | ರೂ.15,000/- |
| 04 | 1200 ಚ.ಅ.ಗಿಂತ ಹೆಚ್ಚು ವಿಸ್ತೀರ್ಣದ ಫ್ಲಾಟ್‌ಗಳಿಗೆ | ರೂ.15,000/- | ರೂ.20,000/- |
| **ಬಿ. ಗೃಹೇತರ ಬಳಕೆದಾರರ ಆಸ್ತಿಗಳಿಗೆ** | | | |
| 05 | ಎಲ್ಲಾ ಮಾದರಿಯ ಗೃಹೇತರ ಆಸ್ತಿಗಳಿಗೆ | ರೂ.20,000/- | ರೂ.25,000/- |

ಮುಂದುವರೆದು ಒಂದು ಬಾರಿ ಫಲಾನುಭವಿ ಬಂಡವಾಳ ವಂತಿಕೆ ಸಂಗ್ರಹಿಸುವ ಹಣವನ್ನು ಬೆಂಗಳೂರು ಜಲಮಂಡಳಿಗೆ ಹಂಚುವುದನ್ನು ಬಾಕಿ ಇಟ್ಟು ಜಂಟಿಯಾಗಿ ನಗರ ಸ್ಥಳೀಯ ಸಂಸ್ಥೆಗಳು ಹಾಗೂ ಕರ್ನಾಟಕ ನಗರ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಮತ್ತು ಹಣಕಾಸು ನಿಗಮವು ಹೊಂದುವ ಜಿಬಿಡಬ್ಲ್ಯೂಎಸ್‌ಪಿ ಬಂಡವಾಳ ವಂತಿಕೆ ಶೀರ್ಷಿಕೆಯಡಿಯಲ್ಲಿ ಇಡತಕ್ಕದ್ದು ಜಂಟಿಲೆಕ್ಕದಲ್ಲಿ ಇಡಬೇಕೆಂದು ಯೋಜನಾ ಚಾಲನಾ ಸಮಿತಿಯು ತೀರ್ಮಾನಿಸಿದೆ.

ಸರ್ಕಾರವು ಯೋಜನಾ ಚಾಲನಾ ಸಮಿತಿಯು ಮಾಡಿದ ಶಿಫಾರಸ್ಸನ್ನು ಪರಿಗಣಿಸಿದೆ. ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ.ನಅಇ 36 ಎಂಎನ್‌ಐ 2004, ಬೆಂಗಳೂರು, ದಿನಾಂಕ.13ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ನೀರು ಸರಬರಾಜು ಯೋಜನೆಯನ್ನು ಅನುಷ್ಠಾನಗೊಳಿಸಲು ಬೆಂಗಳೂರು ಮಹಾನಗರ ಪ್ರದೇಶದ 7 ನಗರಸಭೆಗಳಾದ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರ, ರಾಜರಾಜೇಶ್ವರಿನಗರ, ಯಲಹಂಕ ಮತ್ತು 1 ಕೆಂಗೇರಿ ಪುರಸಭೆ ಪ್ರದೇಶಗಳಲ್ಲಿ ವಿವಿಧ ಮಾದರಿಯ ಆಸ್ತಿಗಳಿಗೆ ಕುರಿತು ಫಲಾನುಭವಿಗಳಿಂದ ಬಂಡವಾಳ ವಂತಿಕೆ ಸಂಗ್ರಹಣೆ ಕುರಿತು ಈ ಕೆಳಕಂಡ ವಿನ್ಯಾಸಕ್ಕೆ ಸರ್ಕಾರವು ಅನುಮೋದನೆಯನ್ನು ನೀಡಿದೆ.

| ಕ್ರಮ ಸಂಖ್ಯೆ | ನಿವೇಶನ / ಫ್ಲಾಟ್ ವಿಸ್ತೀರ್ಣ | ದಿನಾಂಕ.31-7-2004 ರೊಳಗಾಗಿ ಬಳಕೆದಾರರಿಂದ ಸಂಗ್ರಹಿಸಬೇಕಾದ ವಂತಿಗೆಯ ದರ | ದಿನಾಂಕ.31-7-2004 ರೊಳಗಾಗಿ ಬಳಕೆದಾರರಿಂದ ವಂತಿಗೆಯನ್ನು ಪಾವತಿಸದಿದ್ದಲ್ಲಿ ಸಂಗ್ರಹಿಸಬೇಕಾದ ವಂತಿಗೆಯ ಮೊತ್ತ |
|---|---|---|---|
| **ಎ. ಗೃಹ ಬಳಕೆಯ ಆಸ್ತಿಗಳಿಗೆ** | | | |
| 01 | 40x60 ಅಡಿ ಆಳತೆ ಮತ್ತು ಅದಕ್ಕಿಂತ ಕಡಿಮೆ ಅಳತೆಯ ನಿವೇಶನ ಆಸ್ತಿಗಳಿಗೆ | ರೂ.10,000/- | ರೂ.15,000/- |
| 02 | 40x60 ಅಡಿ ಅಳತೆಗಿಂತ ಹೆಚ್ಚು ಅಳತೆಯ ನಿವೇಶನ ಆಸ್ತಿಗಳಿಗೆ | ರೂ.15,000/- | ರೂ.20,000/- |
| 03 | 1200 ಚ.ಅ ವಿಸ್ತೀರ್ಣದ ಫ್ಲಾಟ್‌ಗಳಿಗೆ | ರೂ.10,000/- | ರೂ.15,000/- |
| 04 | 1200 ಚ.ಅ.ಗಿಂತ ಹೆಚ್ಚು ವಿಸ್ತೀರ್ಣದ ಫ್ಲಾಟ್‌ಗಳಿಗೆ | ರೂ.15,000/- | ರೂ.20,000/- |
| **ಬಿ. ಗೃಹೇತರ ಬಳಕೆದಾರರ ಆಸ್ತಿಗಳಿಗೆ** | | | |
| 05 | ಎಲ್ಲಾ ಮಾದರಿಯ ಗೃಹೇತರ ಆಸ್ತಿಗಳಿಗೆ | ರೂ.20,000/- | ರೂ.25,000/- |

2. ಮೇಲ್ಕಂಡ ಫಲಾನುಭವಿ ವಂತಿಯಲ್ಲಿ ಬೆಂಗಳೂರು ಜಲಮಂಡಳಿಯು ವಿಧಿಸುವ ಮಾರ್ಗ ಹಾಗೂ ಸಂಪರ್ಕ ವೆಚ್ಚಗಳನ್ನು ಹೊರತುಪಡಿಸಿ, ನಗರ ಸ್ಥಳೀಯ ಸಂಸ್ಥೆಗಳು ವಸತಿ ಆಸ್ತಿಗಳಿಂದ ಹಾಗೂ ವಾಣಿಜ್ಯ ಆಸ್ತಿಗಳಿಂದ ಸಂಗ್ರಹಿಸಬೇಕಾದ ಕ್ರಮವಾಗಿ ರೂ.1500 ಹಾಗೂ ರೂ.3000 ರಸ್ತೆ ಅಗೆಯುವ ವೆಚ್ಚಗಳನ್ನು ಕೂಡಿಕೊಂಡಿರುತ್ತದೆ. ಮೇಲ್ಕಂಡಂತೆ ಫಲಾನುಭವಿ ಗಳಿಂದ ಬಂಡವಾಳ ವಂತಿಕೆಯನ್ನು ಸಂಸ್ಥೆಗಳು ಸಂಗ್ರಹಿಸಿ ಸಂಬಂಧಿಸಿದ ಸ್ಥಳೀಯ ವಂತಿಕೆ ಹಾಗೂ ಕೆಯುಐಡಿಎಫ್‌ಸಿಯ " GBWASP Beneficiary Capital Contribution Account " ಶೀರ್ಷಿಕೆ ಜಂಟಿ ಖಾತೆಯಲ್ಲಿ ಜಮಾ ಮಾಡತಕ್ಕದ್ದು ಮತ್ತು ಬೆಂಗಳೂರು ಜಲಮಂಡಳಿ ಅವಶ್ಯಕತೆಗೆನುಸಾರ/ರಸ್ತೆ ರಿಪೇರಿ ಕೈಗೊಳ್ಳಲು ಹಣ ವರ್ಗಾಯಿಸತಕ್ಕದ್ದು.

3. ಸ್ಥಳೀಯ ನಗರ ಸಂಸ್ಥೆಗಳು ಮೇಲ್ಕಂಡ ಶೀರ್ಷಿಕೆಯಡಿ ಸಂಗ್ರಹಿಸುವ ಫಲಾನುಭವಿ ಬಂಡವಾಳ ವಂತಿಗೆ ಹಣದಲ್ಲಿ ವಸತಿ ಆಸ್ತಿ ಹಾಗೂ ವಾಣಿಜ್ಯ ಆಸ್ತಿ ಕುರಿತಂತೆ ಸಂಗ್ರಹಿಸುವ ರಸ್ತೆ ಅಗೆಯುವ ವೆಚ್ಚ ಕ್ರಮವಾಗಿ ರೂ.1500 ಹಾಗೂ ರೂ.3000 ಗಳನ್ನು ಸದರಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಸ್ಥಳೀಯ ನಗರ ಸಂಸ್ಥಗಳೇ ಉಳಿಸಿಕೊಳ್ಳುವವು ಹಾಗೂ ಬಾಕಿ ಹಣ ವನ್ನು ಬೆಂಗಳೂರು ಜಲಮಂಡಳಿಯ ಬೇಡಿಕೆಗೆ ತಕ್ಕಂತೆ ಬೆಂಗಳೂರು ಜಲಮಂಡಳಿಗೆ ಪಾವತಿ ಮಾಡತಕ್ಕದ್ದು.

4. ಸುಲಭ ಸಂಗ್ರಹಣೆ ಕ್ರಮವಾಗಿ ಕಟ್ಟಡ ನಕ್ಷೆಗಳನ್ನು ಅನುಮೋದಿಸುವ ಸಂದರ್ಭದಲ್ಲಿ ಸ್ಥಳೀಯ ನಗರ ಸಂಸ್ಥೆಗಳು ಫಲಾನುಭವಿಗಳಿಂದ ಒಂದು ಬಾರಿಗೆ ಬಂಡವಾಳ ವಂತಿಕೆಯನ್ನು ಸಂಗ್ರಹಿಸತಕ್ಕದ್ದು. ಈಗಾಗಲೇ ಮಂಜೂರು ಮಾಡಿದ ನಕ್ಷೆಗಳು ಹಾಗೂ ಇತರ ಆಸ್ತಿಗಳ ವಿಷಯದಲ್ಲಿ, ವ್ಯಾಪಕ ಪ್ರಚಾರ ನೀಡುವುದರೊಂದಿಗೆ ಹಾಗೂ ವಾರ್ಡುವಾರು ಸಂಘಟನೆ ಕಾರ್ಯಚಾರಣೆಯಲ್ಲಿ ಸಂಗ್ರಹಿಸತಕ್ಕದ್ದು.

5. ಫಲಾನುಭವಿ ಬಂಡವಾಳ ವಂತಿಕೆ ಪಾವತಿಸಿದ ಮಾತ್ರಕ್ಕೆ, ನಿಯಮಾನುಸಾರ ಅವಶ್ಯವಿರುವ ಬಡಾವಣೆ, ಕಟ್ಟಡದ ನಕ್ಷೆ ಇತ್ಯಾದಿ ಕುರಿತು ಶಾಸನಬದ್ಧವಾದ ಅನುಮತಿಯನ್ನು ನಾಗರೀಕರು ಪಡೆದುಕೊಳ್ಳುವುದರಿಂದ ಮುಕ್ತಾರನ್ನಾಗಿಸುವುದಿಲ್ಲ. ಅಲ್ಲದೆ, ಕಟ್ಟಡಗಳು, ಬಡಾವಣೆ, ಇತ್ಯಾದಿಗಳ ಸಕ್ರಮೀಕರಣಕ್ಕೆ ಅರ್ಹರನ್ನಾಗಿ ಮಾಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 260

**ವ್ಹಿ.ಆರ್. ಇಲಕಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಡಾ:ಸಿ.ಕೆ. ಜಗದೀಶ್‌ಕುಮಾರ್, ಸಸ್ಯಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಚಿಕ್ಕಮಗಳೂರು ಹಾಲಿ ನಿಯೋಜನೆ ಮೇಲೆ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಚಿಕ್ಕಮಗಳೂರು ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ ಪತ್ರ ಸಂಖ್ಯೆ:ಹಿಂವನಿ:ಸಿಬ್ಬಂದಿ-1-ಸಿಆರ್-45/03-04, ದಿನಾಂಕ:21.01.2004.
2. ಶಿಕ್ಷಣ ಇಲಾಖೆಯ ಅ.ಟಿ.ಸಂಖ್ಯೆ:ಇಡಿ 20 ಡಿಸಿಇ 2004, ದಿನಾಂಕ 21.02.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 22.01.2004ರ ಪತ್ರದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ನಿರ್ದೇಶಕರು ಡಾ: ಸಿ.ಕೆ. ಜಗದೀಶ್ ಕುಮಾರ್, ಸಸ್ಯಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಐ ಡಿ ಎಸ್‌ಜಿ ಸರ್ಕಾರಿ ಕಾಲೇಜು, ಚಿಕ್ಕಮಗಳೂರು, ಇಲ್ಲಿ ಸೇವೆ ಸಲ್ಲಿಸುತ್ತಿದ್ದು ಪ್ರಸ್ತುತ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ, ಚಿಕ್ಕಮಗಳೂರು, ಜಿಲ್ಲೆಯಲ್ಲಿ ನಿಯೋಜನೆ ಮೇಲೆ ಕೆಲಸ ನಿರ್ವಹಿಸುತ್ತಿದ್ದಾರೆ. ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ, ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸುವ ಬಗ್ಗೆ ತಮ್ಮ ಅಭಿಪ್ರಾಯವನ್ನು ನೀಡಿ, ಈ ಅಧಿಕಾರಿಯು ಶಿಕ್ಷಣ ಇಲಾಖೆಯ ಹಿರಿಯ ಶ್ರೇಣಿ ಉಪನ್ಯಾಸಕರಾಗಿದ್ದು, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಿದಲ್ಲಿ, ಇಲಾಖೆಯಲ್ಲಿ ನೇರ ನೇಮಕಾತಿ ಮೂಲಕ 7 (ಏಳು) ಹುದ್ದೆಗಳನ್ನು ಭರ್ತಿ ಮಾಡಬೇಕೆಂದು ಈ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿರುವುದರಿಂದ ಇವರ ಸೇವೆಯನ್ನು ವಿಲೀನಗೊಳಿಸಲು ಅವಕಾಶವಿರುವುದಿಲ್ಲ ಎಂಬುಗಿ ಅಭಿಪ್ರಾಯ ನೀಡಿ, ಈ ಹಿಂದೆ 4 ಮಂದಿ ಶಿಕ್ಷಣ ಇಲಾಖೆಯ ಉಪನ್ಯಾಸಕರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಿದ್ದು, ಸರ್ಕಾರದ ಈ ಕ್ರಮವನ್ನು ಇಲಾಖೆಯ ನೌಕರರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:829-31/99 ಸಲ್ಲಿಸಿದ್ದು, ಈ ರಿಟ್ ಅರ್ಜಿಯು ನ್ಯಾಯಾಲಯದಲ್ಲಿ ಇನ್ನೂ ಇತ್ಯರ್ಥವಾಗಿರುವುದಿಲ್ಲ ಎಂದು ತಿಳಿಸಿ, ಡಾ: ಸಿ.ಕೆ. ಜಗದೀಶ್ ಕುಮಾರ್‌ರವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸುವುದು ಸಮಂಜಸವಲ್ಲ ಎಂದು ಅಭಿಪ್ರಾಯ ನೀಡಿರುತ್ತಾರೆ.

ಡಾ: ಸಿ.ಕೆ. ಜಗದೀಶ್ ಕುಮಾರ್, ಈಗಾಗಲೇ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದು, ಅವರ ಕಾರ್ಯದಕ್ಷತೆಯೂ ಕೂಡ ಪ್ರಶಂಸನೀಯವಾಗಿದ್ದು, ಅವರು ತಮ್ಮ ಕರ್ತವ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು ಬಂದಿದ್ದಾರೆ. ಆದ್ದರಿಂದ ಈ ಹುದ್ದೆಗಳನ್ನು ತುಂಬಲು ದಕ್ಷತೆ ಇಲ್ಲದ ಬೇರೆ ಇಲಾಖೆಯ ಅಧಿಕಾರಿಗಳಿಂದ ತುಂಬುವ ಬದಲು ದಕ್ಷತೆ ಇರುವ ಅಧಿಕಾರಿಗಳಿಂದ

ತುಂಬುವುದು ಅವಶ್ಯವಾಗಿರುತ್ತದೆ. ಆದುದರಿಂದ ಡಾ: ಸಿ.ಕೆ. ಜಗದೀಶ್ ಕುಮಾರ್, ಇವರನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಲು ಹಾಗೂ ಈ ಹಿಂದೆ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ವಿಲೀನಗೊಳಿಸುವಾಗ ವಿಧಿಸಲಾದ ಷರತ್ತುಗಳನ್ನು ಈ ಪ್ರಕರಣದಲ್ಲಿಯೂ ವಿಧಿಸಿ, ಡಾ: ಸಿ.ಕೆ. ಜಗದೀಶ್ ಕುಮಾರ್, ಹಿರಿಯ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ, ಇವರ ಸೇವೆಯನ್ನು ವಿಲೀನಗೊಳಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಮೇಲೆ (2)ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯು ಡಾ: ಸಿ.ಕೆ. ಜಗದೀಶ್ ಕುಮಾರ್, ಸಸ್ಯಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ರಾಜ್ಯ ಕಾಲಿಕ ವೇತನ ಶ್ರೇಣಿಯಲ್ಲಿ ಶಾಶ್ವತವಾಗಿ ಸೇವಾ ವಿಲೀನಗೊಳಿಸಲು ಸಹಮತಿ ನೀಡಿ, ಇವರು ಯು ಜಿ ಸಿ ವೇತನ ಶ್ರೇಣಿಯ ಕಾಲಿಕ ವೇತನ ಶ್ರೇಣಿ ರೂ.10000-325-15200ರಲ್ಲಿ ಪ್ರಸ್ತುತ ರೂ.10,975/- ಮೂಲವೇತನ ಪಡೆಯುತ್ತಿದ್ದಾರೆ ಎಂದು ತಿಳಿಸಿ, ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುವ ಬಗ್ಗೆ ವರದಿ ಆಗಿರುವುದಿಲ್ಲ ಎಂದು ಶಿಕ್ಷಣ ಇಲಾಖೆ ವರದಿ ಮಾಡಿರುತ್ತದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಆದುದರಿಂದ ಸರ್ಕಾರದ ಆದೇಶದ ಭಾಗದಲ್ಲಿ ವಿಧಿಸಿರುವ ನಿಬಂಧನೆಗಳಿಗೆ ಒಳಪಟ್ಟು, ಡಾ: ಸಿ.ಕೆ. ಜಗದೀಶ್ ಕುಮಾರ್, ಹಿರಿಯ ಶ್ರೇಣಿ ಉಪನ್ಯಾಸಕರು, (ಕಾಲೇಜು ಶಿಕ್ಷಣ), ಶಿಕ್ಷಣ ಇಲಾಖೆ, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂ: ಸಕಇ 15 ಬಿಇಟಿ 2004, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2004**

ಡಾ: ಸಿ.ಕೆ. ಜಗದೀಶ್ ಕುಮಾರ್, ಸಸ್ಯಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಐ ಡಿ ಎಸ್ ಜಿ ಸರ್ಕಾರಿ ಕಾಲೇಜು, ಚಿಕ್ಕಮಗಳೂರು, ಕಾಲೇಜು ಶಿಕ್ಷಣ ಇಲಾಖೆ ಇವರ ಸೇವೆಯನ್ನು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು, ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ನೇರ ನೇಮಕಾತಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಿ, ಸರ್ಕಾರವು ಆದೇಶಿಸಿರುತ್ತದೆ.

1. ಡಾ: ಸಿ.ಕೆ. ಜಗದೀಶ್ ಕುಮಾರ್ ರವರ ವೇತನವನ್ನು ಹಿಂದುಳಿದ ವರ್ಗಗಳ ಇಲಾಖೆಯ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ.7400-13120 ರ ಕನಿಷ್ಠ ವೇತನಕ್ಕೆ ನಿಗದಿಪಡಿಸಿದೆ.
2. ಇವರು ಎರಡು ವರ್ಷಗಳ ಅವಧಿಯಲ್ಲಿ ಸದರಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು.
3. ಇವರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 6 ರ ಮೊದಲನೇ ಪರಂತುಕದ ಅನುಸಾರ ನಿಗದಿಪಡಿಸತಕ್ಕದ್ದು
4. ಇವರು ಶಿಕ್ಷಣ ಇಲಾಖೆಯಲ್ಲಿ ಧಾರಣ ಮಾಡಿರುವ ಹುದ್ದೆಯ ಯು.ಜಿ.ಸಿ. ವೇತನ ಶ್ರೇಣಿ ರೂ.10000-325-15200 ಆಗಿದ್ದು, ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಲು ಉದ್ದೇಶಿಸಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ.7400-13120 ಇದ್ದು, ಸದರಿ ವೇತನ ಶ್ರೇಣಿಯಲ್ಲಿ ತಮ್ಮ ವೇತನವನ್ನು ನಿಗದಿಪಡಿಸಲು ಅಧಿಕಾರಿಯು ಒಪ್ಪಿದ್ದು, ಅದರಂತೆ ವೇತನ ನಿಗದಿಪಡಿಸಲಾಗುವುದು.
5. ಈ ವಿಲೀನಕ್ಕೆ ಕಾಲೇಜು ಶಿಕ್ಷಣ ಇಲಾಖೆ ಹಾಗೂ ಸಮಾಜ ಕಲ್ಯಾಣ ಇಲಾಖೆಯ ಒಪ್ಪಿಗೆ ಇರುತ್ತದೆ.
6. ಈ ವಿಲೀನವನ್ನು ಅಧಿಕಾರಿಯ ಕೋರಿಕೆಯ ಮೇರೆಗೆ ಮಾಡಿರುವುದರಿಂದ ಇವರು ವರ್ಗಾವಣೆ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ.
7. ಈ ವಿಲೀನವನ್ನು ಈ ಅಧಿಕಾರಿಯ ಸೇವಾ ಅವಧಿಯಲ್ಲಿ ಒಮ್ಮೆ ಮಾತ್ರ ಮಾಡಲಾಗಿದೆ.
8. ಇವರು ಹಿರಿಯ ಶ್ರೇಣಿ ಉಪನ್ಯಾಸಕರಾಗಿ ಮುಂಬಡ್ತಿ ಪಡೆದಿರುವುದರಿಂದ ಖಾಯಂಪೂರ್ವ ಘೋಷಣೆಯ ಪ್ರಮೇಯ ಉದ್ಭವಿಸುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 261 **ಎಂ.ಎಸ್. ಮರುಳಸಿದ್ದಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ

**ವಿಷಯ:** ಶ್ರೀ ಮಾಣಿಕ ಪ್ರಭು ಶಿಕ್ಷಣ ಸಂಸ್ಥೆ ಮಾಣಿಕ ನಗರ ಹುಮ್ನಾಬಾದ್ ತಾಲ್ಲೂಕು ಬೀದರ್ ಜಿಲ್ಲೆ ಇವರ ರಿಟ್ ಅರ್ಜಿ ಸಂಖ್ಯೆ 20083/02 ಕರ್ನಾಟಕ ರಾಜ್ಯ ಉಚ್ಛನ್ಯಾಯಾಲಯದಲ್ಲಿ ವಿದ್ಯಾರ್ಥಿ ನಿಲಯದ ಮಾನ್ಯತೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1. ಹಿಂದುಳಿದ ವರ್ಗಗಳ ಆಯುಕ್ತರ ಏಕ ಕಡತ ಸಂಖ್ಯೆ ಹಿಂವಇ:ಜನಿ:(ವನಿ):ಬೀದರ್-6:2001-2002 ಸಲ್ಲಿಸಿರುವ ಟಿಪ್ಪಣಿ ದಿನಾಂಕ:05-03-2002.
2. ಸರ್ಕಾರದ ಆದೇಶ ಸಂಖ್ಯೆ ಸಕಇ 21 ಬಿಎಂಎಸ್ 2002 ದಿನಾಂಕ:28-03-2002.
3. ಕರ್ನಾಟಕ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಂಖ್ಯೆ 20083/02 ದಿನಾಂಕ:08/09/2003ರ ನ್ಯಾಯಾಲಯದ ಆದೇಶ.
4. ಪತ್ರ ಸಂಖ್ಯೆ ಹಿಂವನಿ:ಜನಿ(ವನಿ):ಬೀದರ್-6(ಭಾಗ-2)2002-03, ಹಿಂದುಳಿದ ವರ್ಗಗಳ ನಿರ್ದೇಶಕರು ಇವರಿಂದ.

**ಪ್ರಸ್ತಾವನೆ:**

ಶ್ರೀ ಮಾಣಿಕ ಪ್ರಭು ಶಿಕ್ಷಣ ಸಂಸ್ಥೆ ಬೀದರ್ ಮಾಣಿಕ ನಗರ ಈ ಸಂಸ್ಥೆಯ ಶ್ರೀ ಮಾಣಿಕ್ಯ ಪ್ರಭು ಅನುದಾನಿತ ಬಾಲಕರ ವಿದ್ಯಾರ್ಥಿನಿಲಯ ಈ ಸಂಸ್ಥೆಯು ಮಾಣಿಕ್ಯನಗರದಲ್ಲಿ ವಿದ್ಯಾರ್ಥಿನಿಲಯವನ್ನು ನಡೆಸುತ್ತಿದೆ. ಇದು ಸಮಾಜ ಕಲ್ಯಾಣ ಇಲಾಖೆಯಿಂದ ಅನುದಾನವನ್ನು ಪಡೆಯುತ್ತಿದ್ದು, 1959 ರಿಂದಲೂ ಸಹ ನಡೆಯುತ್ತಿದೆ. ಹಿಂದುಳಿದ ವರ್ಗಗಳ ಇಲಾಖೆಯು ಬೇರ್ಪಟ್ಟ ತರುವಾಯ ಇದನ್ನು ಹಿಂದುಳಿದ ವರ್ಗಗಳ ಇಲಾಖೆಗೆ ವರ್ಗಾಯಿಸಲಾಗಿದೆ. 1996-97ನೇ ಸಾಲಿನಲ್ಲಿ ಮಕ್ಕಳ ಮಂಜೂರಾತಿ ಸಂಖ್ಯೆಯನ್ನು 43ರಿಂದ 75ಕ್ಕೆ ಹೆಚ್ಚಿಸಲಾಗಿದೆ. ತರುವಾಯ ಸರ್ಕಾರದ ಆದೇಶ ಸಂ:ಸಕಇ 94 ಬಿಎಂಎಸ್ 99, ದಿನಾಂಕ 3-7-2000ರಲ್ಲಿ ಮಂಜೂರಾತಿ ಸಂಖ್ಯೆಯನ್ನು 75 ರಿಂದ 125ಕ್ಕೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ 1 ರಲ್ಲಿನ ಟಿಪ್ಪಣಿಯಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ಆಯುಕ್ತರು ಕೆಳಕಂಡಂತೆ ವರದಿ ಮಾಡಿರುತ್ತಾರೆ.

ದಿನಾಂಕ:6-9-2001 ರಂದು ಇಲಾಖೆಯ ಜಂಟಿ ನಿರ್ದೇಶಕರು ವಿದ್ಯಾರ್ಥಿನಿಲಯಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ವಿದ್ಯಾರ್ಥಿನಿಲಯದ ಮಂಜೂರಾತಿ ಸಂಖ್ಯೆ 125 ಆಗಿದ್ದರೂ ಪ್ರತಿ ದಿನ ವಿದ್ಯಾರ್ಥಿನಿಲಯದಲ್ಲಿ 110 ವಿದ್ಯಾರ್ಥಿಗಳು ಮಾತ್ರ ಇರುತ್ತಾರೆ ಹಾಗೂ ಭೇಟಿಯ ವೇಳೆಯಲ್ಲಿ 97 ವಿದ್ಯಾರ್ಥಿಗಳು ಮಾತ್ರ ಹಾಜರಿದ್ದರು.

ವಿದ್ಯಾರ್ಥಿ ನಿಲಯದಲ್ಲಿ 6 ಸ್ನಾನದ ಕೊಠಡಿಗಳು ಹಾಗೂ 6 ಶೌಚಾಲಯಗಳು ಇದ್ದವು. 2 ಸ್ನಾನದ ಕೊಠಡಿಗಳು ಮಾತ್ರ ಉಪಯೋಗದಲ್ಲಿದ್ದು ಉಳಿದ ಕೊಠಡಿಗಳು ದುಸ್ಥಿತಿಯಲ್ಲಿದ್ದು, ವಿದ್ಯಾರ್ಥಿಗಳ ಸ್ನಾನ ಶೌಚಾಲಯಗಳಿಗೆ ಅನಾನುಕೂಲ ಉಂಟಾಗಿರುತ್ತದೆ. ಎಂಬ ಅಂಶವನ್ನು ಗಮನಿಸಿ, ಸದರಿ ಅಂಶಗಳ ಬಗ್ಗೆ ಸಂಸ್ಥೆಯ ಕಾರ್ಯದರ್ಶಿಗಳಿಗೆ ಕಾರಣ ಕೇಳುವ ನೋಟೀಸನ್ನು ದಿನಾಂಕ:15-9-2001 ರಂದು ಜಾರಿ ಮಾಡಿದ್ದಾಗ್ಯೂ ಸಂಸ್ಥೆಯವರು ಯಾವುದೇ ವಿವರಣೆ ನೀಡಿರುವುದಿಲ್ಲವೆಂದು ಸರ್ಕಾರದ ಗಮನಕ್ಕೆ ತಂದು ಈ ಖಾಸಗಿ ಸಂಸ್ಥೆಯ ಸಂಖ್ಯಾಬಲವನ್ನು 125ರಿಂದ 100ಕ್ಕೆ ಕಡಿಮೆಗೊಳಿಸಿ ಸರ್ಕಾರದ ಆದೇಶವನ್ನು ಹೊರಡಿಸಲು ಪ್ರಸ್ತಾಪಿಸಿದ್ದರು.

"ನೋಟೀಸ್ ಜಾರಿ ಮಾಡಿದಾಗ್ಯೂ ಸಹ ಉತ್ತರ ನೀಡಿಲ್ಲ. ಇಷ್ಟೊಂದು ಮಕ್ಕಳ ಸಂಖ್ಯೆಗೆ 2 ಸ್ನಾನದ ಕೊಠಡಿಗಳು, 2 ಶೌಚಾಲಯಗಳು, ಯಾವ ಕಾರಣಕ್ಕೂ ಸಾಕಾಗುವುದಿಲ್ಲ. ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಲು ಸಂಸ್ಥೆಯವರು ನಡೆಸಿದ ಪ್ರಯತ್ನ ನೋಡಿ ಇವರು ಒಳ್ಳೆಯ ವಿದ್ಯಾರ್ಥಿನಿಲಯ ನಡೆಸುತ್ತಿರಬಹುದು ಎಂದು ನನಗೆ ಅಭಿಪ್ರಾಯ ಮೂಡಿತ್ತು. ಈಗ ಅದು ಸುಳ್ಳಾಗಿದೆ. ಆದುದರಿಂದ ಸದರಿ ಸಂಸ್ಥೆಯವರು ವಿದ್ಯಾರ್ಥಿನಿಲಯವನ್ನು ಸರಿಯಾದ ರೀತಿಯಲ್ಲಿ ನಡೆಸುತ್ತಿರುವುದಿಲ್ಲವೆಂದು ಪರಿಗಣಿಸಿ ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ 2 ರಲ್ಲಿನ ದಿನಾಂಕ 28-03-2002ರ ಆದೇಶದಲ್ಲಿ ಶ್ರೀ ಮಾಣಿಕ ಪ್ರಭು ಅನುದಾನಿತ ವಿದ್ಯಾರ್ಥಿ ನಿಲಯ ಮಾಣಿಕ ನಗರ ಹುಮ್ನಾಬಾದ್ ತಾಲ್ಲೂಕು ಬೀದರ್ ಜಿಲ್ಲೆ ಈ ವಿದ್ಯಾರ್ಥಿನಿಲಯದ ಮಾನ್ಯತೆಯನ್ನು 2001-02ನೇ ಸಾಲಿನಲ್ಲಿ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿತ್ತು.

ಈ ಆದೇಶದಿಂದ ಬಾಧಿತರಾದ ಶ್ರೀ ಮಾಣಿಕ್ಯಪ್ರಭು ಅನುದಾನಿತ ಖಾಸಗಿ ವಿದ್ಯಾರ್ಥಿನಿಲಯ ಇವರು ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 20083/2002 ಯನ್ನು ದಾಖಲಿಸಿದರು. ಈ ರಿಟ್ ಅರ್ಜಿಯನ್ನು ಪರಿಶೀಲಿಸಿದ ನ್ಯಾಯಾಲಯವು ದಿನಾಂಕ:8-9-2003ರಂದು ಆದೇಶ ಮಾಡಿ ಮಾನ್ಯತೆಯನ್ನು ರದ್ದುಗೊಳಿಸಿ ಸರ್ಕಾರವು ಹೊರಡಿಸಿದ್ದ ಆದೇಶವನ್ನು ರದ್ದುಪಡಿಸಿ ಆದೇಶಿಸಿದೆ, ಮತ್ತು ಸದರಿ ಸಂಸ್ಥೆಯವರು ದಿನಾಂಕ:24-9-2001ರಂದು ನೀಡಿರುವ ಉತ್ತರವನ್ನು ಅಥವಾ ವಿವರಣೆಯನ್ನು ಸರ್ಕಾರದ ದಾಖಲೆಗಳಿಗೆ ತೆಗೆದುಕೊಂಡು ನಿಯಮಗಳ ಅವಕಾಶಗಳ ಮತ್ತು ಸನ್ನಿವೇಶಗಳನ್ನು ಪರಿಗಣಿಸಿ ಒಂದು ದಿನಾಂಕವನ್ನು ಗೊತ್ತುಪಡಿಸಿ ಅರ್ಜಿದಾರರ ಹೇಳಿಕೆಗಳನ್ನು ಪಡೆದು ಸೂಕ್ತ ಆದೇಶವನ್ನು ಉಚ್ಚ ನ್ಯಾಯಾಲಯದ ಸದರಿ ಆದೇಶವನ್ನು ಸ್ವೀಕರಿಸಿದ 4 ತಿಂಗಳುಗಳೊಳಗೆ ಅಂತಹ ಆದೇಶವನ್ನು ಮಾಡಬೇಕೆಂದು, ಒಂದು ವೇಳೆ ಈ ಕಾಲಾವಧಿಯಲ್ಲಿ ಒಂದು ನಿರ್ಣಯವನ್ನು ತೆಗೆದುಕೊಳ್ಳದೇ ಇದ್ದ ಪಕ್ಷದಲ್ಲಿ ಪ್ರತಿವಾದಿಗಳು ಸದರಿ ಸಂಸ್ಥೆಗೆ ಹಿಂದೆಯೇ ನೀಡಲಾಗಿದ್ದ ಮಾನ್ಯತೆಯ ಆದೇಶವನ್ನು ಪುನರ್ ಸ್ಥಾಪಿಸತಕ್ಕದ್ದು ಮತ್ತು ಇಂತಹ ಆದೇಶವು ಸರ್ಕಾರವು ಅಂತಿಮವಾಗಿ ತೆಗೆದುಕೊಳ್ಳುವ ನಿರ್ಣಯಕ್ಕೆ ಒಳಪಟ್ಟಿರತಕ್ಕದ್ದು ಎಂದು ಆದೇಶ ನೀಡಿರುತ್ತದೆ.

ಉಚ್ಚ ನ್ಯಾಯಾಲಯದ ನಿರ್ದೇಶನದ ಪ್ರಕಾರ ಅರ್ಜಿದಾರರ ಮನವಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಪರಿಶೀಲಿಸಿ ಅವರ ಕೋರಿಕೆಯನ್ನು ದಿನಾಂಕ:01-12-2003ರಂದು ಆಲಿಸಲಾಗಿದೆ. ಶ್ರೀ ಮಾಣಿಕ ಪ್ರಭು ಶಿಕ್ಷಣ ಸಂಸ್ಥೆಯ ಅಧ್ಯಕ್ಷರು (ಅರ್ಜಿದಾರರು) ಕೋರಿಕೆಯಂತೆ ವಿದ್ಯಾರ್ಥಿನಿಲಯದ ತನಿಖೆಯನ್ನು ಹಿಂದುಳಿದ ವರ್ಗಗಳ ಇಲಾಖೆಯ ಅಧಿಕಾರಿಯಿಂದ ಕೈಗೊಳ್ಳಲು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ನಿರ್ದೇಶನದ ಮೇರೆಗೆ ಹಿಂದುಳಿದ ವರ್ಗಗಳ ಇಲಾಖೆಯ ಅಧಿಕಾರಿಯೊಬ್ಬರು ಸಂಸ್ಥೆಯ ವಿದ್ಯಾರ್ಥಿ ನಿಲಯಕ್ಕೆ ಭೇಟಿ ನೀಡಿ ದಿನಾಂಕ:18-12-2003ರೊಳಗೆ ವರದಿ ನೀಡಬೇಕೆಂದು ಆದೇಶಿಸಿದ್ದಾರೆ.

ಹಿಂದುಳಿದ ವರ್ಗಗಳ ಇಲಾಖೆಯ ನಿರ್ದೇಶಕರು ಮೇಲೆ ಓದಲಾದ ಕ್ರಮ ಸಂಖ್ಯೆ 3 ರಲ್ಲಿನ ತಮ್ಮ ಪತ್ರದೊಡನೆ ತನಿಖಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿದ್ದಾರೆ. ದಿನಾಂಕ:15-12-2003 ರಂದು ವಿದ್ಯಾರ್ಥಿ ನಿಲಯಕ್ಕೆ ಇಲಾಖೆಯ ಉಪ ನಿರ್ದೇಶಕರು ಭೇಟಿ ನೀಡಿ ಸಲ್ಲಿಸಿರುವ ವರದಿಯ ಪ್ರಕಾರ ಸಂಸ್ಥೆಯು 125 ವಿದ್ಯಾರ್ಥಿ ಸಂಖ್ಯಾಬಲಕ್ಕೆ ಮಾನ್ಯತೆ ಪಡೆದಿದೆ. ಅದರ ಪೈಕಿ 120 ವಿದ್ಯಾರ್ಥಿಗಳು ಪ್ರವೇಶ ಪಡೆದಿದ್ದಾರೆ ಎನ್ನಲಾಗಿದೆ. (ಹಾಜರಾತಿ ಪ್ರಕಾರ 119) ಈ 119 ವಿದ್ಯಾರ್ಥಿಗಳ ಪೈಕಿ ತನಿಖೆಯ ವೇಳೆಗೆ 100 ವಿದ್ಯಾರ್ಥಿಗಳು ಮಾತ್ರ ಹಾಜರಿರುವುದಾಗಿ ವರದಿಯಾಗಿದೆ. ಆಹಾರ ಸಾಮಗ್ರಿಗಳ ದಾಸ್ತಾನು ಇರುವುದರ ಬಗ್ಗೆ ಹಾಗೂ ಆಹಾರ ಪದಾರ್ಥಗಳನ್ನು ವಿದ್ಯಾರ್ಥಿಗಳಿಗೆ ನೀಡುತ್ತಿರುವ ಅಂಶಗಳನ್ನು ವರದಿಯಲ್ಲಿ ಉಲ್ಲೇಖಿಸಲಾಗಿದೆ. ತನಿಖಾಧಿಕಾರಿಗಳ ಪ್ರಕಾರ ವಿದ್ಯಾರ್ಥಿ ನಿಲಯದಲ್ಲಿ ಅಗತ್ಯ ಮೂಲಭೂತ ಸೌಕರ್ಯ, ಊಟ, ವಸತಿ ವ್ಯವಸ್ಥೆ ತೃಪ್ತಿಕರವಾಗಿದೆ ಎಂದು ಮಂಡಿಸಿರುತ್ತಾರೆ.

ವಿಚಾರಣಾಧಿಕಾರಿಗಳು ಈ ವಿದ್ಯಾರ್ಥಿ ನಿಲಯದಲ್ಲಿ ಅಗತ್ಯ ಮೂಲಭೂತ ಸೌಕರ್ಯದೊಂದಿಗೆ ಊಟ ಹಾಗೂ ವಸತಿ ವ್ಯವಸ್ಥೆ ತೃಪ್ತಿಕರವಾಗಿರುವುದರಿಂದ ಹಾಗೂ ಕುಡಿಯುವ ನೀರು, ಸ್ನಾನ ಹಾಗೂ ಶೌಚಾಲಯಗಳಿಗೆ ವ್ಯವಸ್ಥೆ ಕಲ್ಪಿಸಿರುವುದರಿಂದ ಈ ವಿದ್ಯಾರ್ಥಿ

**ವಿಷಯ:** ಮೆಸರ್ಸ್ ಜಸ್ಪರ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್ಇಡಿ / 06 / ದಿನ್ನಿಕೆರೆ / 2003 / 1458, ದಿನಾಂಕ : 17.9.2003.

2. ದಿನಾಂಕ : 5.11.2003 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಜಸ್ಪರ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಗುಟ್ಟಹಳ್ಳಿ ಗ್ರಾಮದ ದಿನ್ನಿಕೆರೆ ಹಳ್ಳಕ್ಕೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಂಇ 243 ಎನ್‌ಸಿಇ 2003, ಬೆಂಗಳೂರು, ದಿನಾಂಕ : 26ನೇ ಫೆಬ್ರವರಿ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಜಸ್ಪರ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಗುಟ್ಟಹಳ್ಳಿ ಗ್ರಾಮದ ದಿನ್ನಿಕೆರೆ ಹಳ್ಳಕ್ಕೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು [ಲ್ಯಾಂಜಿಟ್ಯೂಡ್ : 75–34'–36'' ಪೂರ್ವ ಮತ್ತು ಲ್ಯಾಟಿಟ್ಯೂಡ್ 13–2'-17'' ಉತ್ತರ] ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ)ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಕಂದಾಯ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ.ಪಿ.ಸಿ.ಎಲ್.)ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 276

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರದ 7ನೇ ಘಟಕಕ್ಕೆ ಒದಗಿಸಲಾಗಿದ್ದ ಸರ್ಕಾರಿ ಖಾತರಿಯನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಅಧ್ಯರ್ಪಣ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಇಂಇ 90 ಪಿಪಿಸಿ 98, ದಿನಾಂಕ: 22.6.2000.
2. ಸರ್ಕಾರದ ಆದೇಶ ಸಂಖ್ಯೆ : ಇಂಇ 90 ಪಿಪಿಸಿ 98, ದಿನಾಂಕ: 18.10.2001.
3. ಸರ್ಕಾರದ ಆದೇಶ ಸಂಖ್ಯೆ : ಇಂಇ 90 ಪಿಪಿಸಿ 98, ದಿನಾಂಕ: 27.2.2003.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಎ1/ಎಫ್3/ಬಿ2/8236/ ದಿನಾಂಕ: 17/12/2003.

**ಪ್ರಸ್ತಾವನೆ:**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ರಾಯಚೂರು ಶಾಖೋತ್ಪನ್ನ ಕೇಂದ್ರದ 7ನೇ ಘಟಕವನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ವಿವಿಧ ಬ್ಯಾಂಕ್‌ಗಳು ಹಾಗೂ ವಾಣಿಜ್ಯ ಸಂಸ್ಥೆಗಳಿಂದ ಪಡೆದ ಸಾಲಕ್ಕೆ ಮೇಲೆ (1) ರಿಂದ (3) ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ಒಟ್ಟು ರೂ.512 ಕೋಟಿಗಳ ಸರ್ಕಾರಿ ಖಾತರಿಯನ್ನು ಒದಗಿಸಲಾಗಿತ್ತು. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರು ವಿದ್ಯುತ್ ದರವನ್ನು ಇಳಿಸುವ ದೃಷ್ಟಿಯಿಂದ ಹಾಗೂ ಈ ಸೌಲಭ್ಯವನ್ನು ಗ್ರಾಹಕರಿಗೆ ವಿಸ್ತರಿಸುವ ದೃಷ್ಟಿಯಿಂದ ಸಾಲ ನೀಡುವ ಸಂದರ್ಭಗಳಲ್ಲಿ ಸರ್ಕಾರಿ ಖಾತರಿಯ ಷರತ್ತನ್ನು ಕೈಬಿಡಬೇಕೆಂದು ಹಣಕಾಸು ಸಂಸ್ಥೆಗಳನ್ನು ನಿಗಮವು ಕೋರಿದ್ದು, ಈ ಕ್ರಮದಿಂದ ನಿಗಮಕ್ಕೆ ಸಾಲದ ಅವಧಿಯಲ್ಲಿ ರೂ.45ಕೋಟಿಗಳ ಕಮೀಷನ್ ಹಣವು ಉಳಿತಾಯವಾಗಲಿರುವ ಹಿನ್ನೆಲೆಯಲ್ಲಿ ಆರ್.ಟಿ.ಪಿ.ಎಸ್. 7ನೇ ಘಟಕಕ್ಕಾಗಿ ಒದಗಿಸಲಾಗಿದ್ದ ರೂ.512 ಕೋಟಿ ಸರ್ಕಾರಿ ಖಾತರಿಯನ್ನು ಅಧ್ಯರ್ಪಣ ಮಾಡುತ್ತಿರುವುದಾಗಿ ತಿಳಿಸಿದ್ದಾರೆ.

2. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 104 ಪಿಪಿಸಿ 2003, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2004**

3. ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರದ 7ನೇ ಘಟಕವನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ಒದಗಿಸಲಾಗಿದ್ದ ರೂ.512 ಕೋಟಿ ಸರ್ಕಾರಿ ಖಾತರಿಯನ್ನು ಅಧ್ಯರ್ಪಣ ಮಾಡಿರುವುದನ್ನು ಈ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ: ಎಫ್‌ಡಿ 17 ಇಎಕ್ಸ್ ಪಿ1/2004 ದಿನಾಂಕ: 05/02/2004 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 277

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎಸ್. ರಾಜಪ್ಪ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ನಿವೃತ್ತ) ರವರ ವಿರುದ್ಧದ ಶಿಸ್ತುಕ್ರಮಗಳ ಬಗ್ಗೆ.

**ಓದಲಾಗಿದೆ:**
1. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂಖ್ಯೆ:ತೋಇ:ಆ:ಸಿ:ವಿನಿ10-2: 83:99-2000, ದಿನಾಂಕ:10-12-2003 ಮತ್ತು 9-10-2003.

**ಪ್ರಸ್ತಾವನೆ:**

ಶ್ರೀ ಎಸ್. ರಾಜಪ್ಪ, ನಿವೃತ್ತ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ) ಶಿಕಾರಿಪುರ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ 1997-98ನೇ ಸಾಲಿನಲ್ಲಿ ಹನಿ ನೀರಾವರಿ ಯೋಜನೆಯಡಿ, ಯೋಜನೆಯ ಮಾರ್ಗಸೂಚಿಗಳನ್ನು ಉಲ್ಲಂಘಿಸಿ, ಫಲಾನುಭವಿಗಳಿಗೆ ಹೆಚ್ಚುವರಿಯಾಗಿ ಸಹಾಯಧನ ಪಾವತಿಸಿರುವ ಬಗ್ಗೆ ಒಟ್ಟು 7 ಆರೋಪಗಳನ್ನು ಮಾಡಿ ಸದರಿ ಅಧಿಕಾರಿಗೆ ಆರೋಪ ಪಟ್ಟಿಯನ್ನು ಜಾರಿ ಮಾಡಲಾಗಿದ್ದು, ಈ ಆರೋಪಗಳಿಗೆ ಸದರಿ ಅಧಿಕಾರಿಯು ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದಾರೆ. ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಕ ಮಾಡುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರು ಪ್ರಸ್ತಾಪಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕೃತೋಇ 167 ತೋಸೇಪ 1999 (ಭಾಗ), ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2004**

ಶ್ರೀ ಎಸ್. ರಾಜಪ್ಪ, ನಿವೃತ್ತ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರು ಈ ಹಿಂದೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ) ಶಿಕಾರಿಪುರ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ, 1997-98ನೇ ಸಾಲಿನಲ್ಲಿ ಶಿಕಾರಿಪುರ ತಾಲ್ಲೂಕಿನಲ್ಲಿ ಹನಿ ನೀರಾವರಿ ಯೋಜನೆಯಡಿ, ಯೋಜನೆಯ ಮಾರ್ಗಸೂಚಿಯನ್ನು ಉಲ್ಲಂಘಿಸಿ, ಫಲಾನುಭವಿಗಳಿಗೆ ಹೆಚ್ಚುವರಿಯಾಗಿ ಸಹಾಯಧನ ಪಾವತಿಸಿರುವ ಬಗ್ಗೆ ಮಾಡಲಾದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 11ನೇ ನಿಯಮದ (2)ನೇ ಉಪ ನಿಯಮ ಮತ್ತು (3)ನೇ ಉಪ ನಿಯಮದ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಎಂ. ನಟರಾಜಮೂರ್ತಿ ಇವರನ್ನು

ವಿಚಾರಣಾಧಿಕಾರಿಯನ್ನಾಗಿಯೂ, ಹಾಗೂ ವ್ಯವಸ್ಥಾಪಕರು, ಲೆಕ್ಕ ಶಾಖೆ, ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ನಡೆಸಿ, ಮೂರು ತಿಂಗಳೊಳಗಾಗಿ ಪೂರೈಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೆಯೇ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ: ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ರೂ.5,000-00 (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ಮೂರು ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 278

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಕೊಪ್ಪಳ ಗ್ರಾಮದ ಸ.ನಂ.602:6 ವಿಸ್ತೀರ್ಣ 8.00 ಎಕರೆ ಹೆಚ್ಚುವರಿ ಜಮೀನನ್ನು ಕುಷ್ಠರೋಗಿಗಳ ಪುನರ್ವಸತಿ ಕೇಂದ್ರ ಬದಲಾಗಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಸಂಸ್ಥೆಯ ಸಲುವಾಗಿ ಕ.ಭೂ.ಸು.ಕಾಯ್ದೆ, 1961ರ ಕಲಂ 77(3)ರ ಅಡಿಯಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿ, ಕೊಪ್ಪಳ ಅವರ ಪತ್ರ ಸಂಖ್ಯೆ:ಭೂಸು:26:97-98:2000, ದಿನಾಂಕ 4-4-03 ಮತ್ತು 27-1-03.
2. ಸರ್ಕಾರದ ಆದೇಶ ಸಂಖ್ಯೆ:ಕಂಇ 201 ಎಲ್‌ಆರ್‌ಎ 2001 3-12-01 ಮತ್ತು ತಿದ್ದುಪಡಿ ದಿನಾಂಕ 10-12-02.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಕೊಪ್ಪಳ ಅವರು ಕೊಪ್ಪಳ ತಾಲ್ಲೂಕು, ಕೊಪ್ಪಳ ಗ್ರಾಮದ ಸರ್ವೆ ನಂ. 602:6 ರಲ್ಲಿ 8 ಎಕರೆ ಜಮೀನನ್ನು ಸರ್ಕಾರದ ಆದೇಶ ಸಂಖ್ಯೆ: ಕಂಇ 201 ಎಲ್‌ಆರ್‌ಎ 2001 ದಿನಾಂಕ 3-12-2001ರ ಆದೇಶದಲ್ಲಿ ಕೊಪ್ಪಳ ಜಿಲ್ಲಾ ಕಾರಾಗೃಹ ಕಟ್ಟಡ ನಿರ್ಮಾಣಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 77(3) ರಲ್ಲಿ ಮೀಸಲಿಸಿರಿದ ಜಮೀನನ್ನು ರದ್ದುಪಡಿಸಿ ಜಿಲ್ಲಾ ಕುಷ್ಟ ರೋಗಿಗಳ ಪುನರ್ವಸತಿ ಕೇಂದ್ರಕ್ಕೆ ಮಾರ್ಪಾಟು ಮಾಡಿ ಆದೇಶ ಹೊರಡಿಸುವಂತೆ ದಿನಾಂಕ 27.1.2003ರ ಪತ್ರದಲ್ಲಿ ಕೋರಿದ್ದು ನಂತರ, ದಿನಾಂಕ 4-4-2003 ರ ಪತ್ರದಲ್ಲಿ ಸದರಿ ಜಮೀನನ್ನು ಕುಷ್ಟ ರೋಗಿಗಳ ಪುನರ್ವಸತಿ ಕೇಂದ್ರದ ಬದಲಾಗಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಸಂಸ್ಥೆಗೆ ಮೀಸಲಿರಿಸಿ ಮಾರ್ಪಡಿಸಿದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ಆರ್‌ಡಿ 56 ಎಲ್‌ಆರ್‌ಎಂ 2003, ಬೆಂಗಳೂರು, ದಿನಾಂಕ: 28ನೇ ಜನವರಿ 2004**

ಸರ್ಕಾರದ ಆದೇಶ ಸಂಖ್ಯೆ ಕಂಇ 201 ಎಲ್‌ಆರ್‌ಎ 2001 ದಿನಾಂಕ 3-12-2001 ಮತ್ತು ಸಮಸಂಖ್ಯೆಯ ತಿದ್ದುಪಡಿ ದಿನಾಂಕ 10-12-2002ರ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆದಿದೆ. ಕೊಪ್ಪಳ ಜಿಲ್ಲೆಯ, ಕೊಪ್ಪಳ ತಾಲ್ಲೂಕು, ಕೊಪ್ಪಳ ಗ್ರಾಮದ ಸರ್ವೆ ನಂ.602:6 ರಲ್ಲಿನ 8.00 ಎಕರೆ ಹೆಚ್ಚುವರಿ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 77(3)ರ ಅಡಿಯಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ "ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಸಂಸ್ಥೆ, ಕೊಪ್ಪಳ" ಇವರಿಗೆ ಕಾಯ್ದಿರಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 279

**ವಿ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ)

**ವಿಷಯ:** ಹಿರೇಕೆರೂರು ತಾಲ್ಲೂಕು, ಹಿರೇಮೊರಬ ಗ್ರಾಮದ ರಿ.ಸ.ನಂ:7:6ಬ:2, ಕ್ಷೇತ್ರ 04 ಗುಂಟೆ ಸರ್ಕಾರಿ ಶಾಲಾ ಅಭಿವೃದ್ಧಿಗಾಗಿ ಕಾಯ್ದಿರಿಸುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿ ಹಾವೇರಿ ಅವರ ಪತ್ರ ಸಂಖ್ಯೆ: ಭೂಸು:ವಹಿ:88:2003-04, ದಿನಾಂಕ: 22-12-03.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಹಾವೇರಿ, ಅವರು ಹಿರೇಕೆರೂರು ತಾಲ್ಲೂಕು ಹಿರೇಮೊರಬ ಗ್ರಾಮದ ರಿ.ಸರ್ವೆ ನಂ:7:6ಬ:2, ರಲ್ಲಿ 04 ಗುಂಟೆ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಸರ್ಕಾರಿ ಶಾಲಾ ಅಭಿವೃದ್ಧಿಗಾಗಿ ಮೀಸಲು ಇರಿಸುವ ಬಗ್ಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 77 (3)ರಡಿ ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸಲು ಶಿಫಾರಸ್ಸು ಮಾಡಿರುತ್ತಾರೆ.

**ಆದೇಶ ಸಂಖ್ಯೆ: ಕಂಇ: 140 ಎಲ್‌ಆರ್‌ಎಂ 2003, ಬೆಂಗಳೂರು, ದಿನಾಂಕ: 28ನೇ ಜನವರಿ 2004**

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕು ಹಿರೇಮೊರಬ ಗ್ರಾಮದ ರಿ.ಸರ್ವೆ ನಂ:7:6ಬ:2ರಲ್ಲಿ 04 ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 77 (3)ರ ಅಡಿಯಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಸರ್ಕಾರಿ ಶಾಲಾ ಅಭಿವೃದ್ಧಿಗಾಗಿ ಮೀಸಲಿರಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 280

**ವಿ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2003-04ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಎರಡನೇ ಕಂತಿನ ರಾಜ್ಯದ ಪಾಲಿನ ಹಣ 23 ಜಿಲ್ಲೆಗಳಿಗೆ ಬಿಡುಗಡೆ (ಶೇ.25 ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:17014:10:2003 ಎಸ್‌ಜಿಎಸ್‌ವೈ (ಡಿಅಡ್‌ಮಿನ್) ಎಸ್‌ಆರ್ ನಂ.24 ದಿನಾಂಕ 13.06.2003.
2. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 7 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ 08.09.2003.
3. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:17014:10:2003 ಎಸ್‌ಜಿಎಸ್‌ವೈ1 (ಡಿಅಡ್‌ಮಿನ್) ಎಸ್‌ಆರ್‌ನಂ. 106 ದಿನಾಂಕ 16.01.2004 ಮತ್ತು ಎಸ್‌ಆರ್ ನಂ.121 ದಿನಾಂಕ:27.01.2004.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2003-04ನೇ ಸಾಲಿಗೆ ಒಂದನೇ ಕಂತಿನ ಹಣ ರೂ.481.62 ಲಕ್ಷ ಮತ್ತು ರೂ. 160.54 ಲಕ್ಷ ಅನುಕ್ರಮವಾಗಿ ಬಿಡುಗಡೆ ಮಾಡಿವೆ. ಈಗ ಕೇಂದ್ರ ಸರ್ಕಾರ ಉಲ್ಲೇಖ (3)ರಂತೆ 23 ಜಿಲ್ಲೆಗಳಿಗೆ ರೂ.376.33 ಲಕ್ಷ ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರವು ಇದಕ್ಕನುಗುಣವಾಗಿ ರೂ.125.44 ಲಕ್ಷ ಬಿಡುಗಡೆ ಮಾಡಬೇಕಾಗಿತ್ತು. ಆದರೆ ರಾಜ್ಯದ ಆಯವ್ಯಯದಲ್ಲಿ ಹಣದ ಕೊರತೆ ಇರುವುದರಿಂದ ಲಭ್ಯವಿರುವ ಹಣ ರೂ. 123.50 ಲಕ್ಷವನ್ನು 23 ಜಿಲ್ಲೆಗಳಿಗೆ ಬಿಡುಗಡೆ ಮಾಡುತ್ತಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ರಾಜ್ಯ ಸರ್ಕಾರವು 23 ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಹಣ ರೂ.123.50 ಲಕ್ಷಗಳನ್ನು (ರೂ.ಒಂದು ನೂರ ಇಪ್ಪತ್ತಮೂರು ಲಕ್ಷದ ಐವತ್ತು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. (ಅನುಬಂಧ ಲಗತ್ತಿಸಿದೆ)

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ಆಡಳಿತ ನಿರ್ವಹಣೆಗಾಗಿ ಉಪಯೋಗಿಸುವುದು.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-201-ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. (2515-00-196-1-06-201)

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2003-2004ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು. ರಾಜ್ಯದ ಉಸ್ತುವಾರಿ ಕೋಶಗಳಾದ ಸ್ವಉದ್ಯೋಗ ಕಾರ್ಯಕ್ರಮ ಹಾಗೂ ಪ್ರದೇಶಾಭಿವೃದ್ಧಿ ಕಾರ್ಯಕ್ರಮ ಶಾಖೆಗಳು ಹಣ ಉಪಯುಕ್ತತಾ ಪತ್ರವನ್ನು ನಿರ್ದೇಶಕರು (ಸ್ವಉಕಾ) ರವರಿಗೆ ನೀಡುವುದು.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 43 ಪಿಬಿಎಸ್ 2003 ದಿನಾಂಕ 10-02-2004 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.113/03 ದಿನಾಂಕ 20.02.2004 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಶಾಮಭಟ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 7 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಎರಡನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಎರಡನೇ ಕಂತು |
|---|---|---|---|
| 1. | ಬೆಂಗಳೂರು ನಗರ | 23.60 | 7.87 |

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಎರಡನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಎರಡನೇ ಕಂತು |
|---|---|---|---|
| 2. | ಬಾಗಲಕೋಟೆ | 23.68 | 7.89 |
| 3. | ಬೆಳಗಾಂ | 26.37 | 6.85 |
| 4. | ಬಳ್ಳಾರಿ | 18.54 | 6.18 |
| 5. | ಬಿಜಾಪುರ | 22.56 | 7.52 |
| 6. | ಚಾಮರಾಜನಗರ | 5.42 | 1.81 |
| 7. | ಚಿತ್ರದುರ್ಗ | 22.87 | 7.62 |
| 8. | ದಾವಣಗೆರೆ | 20.98 | 6.99 |
| 9. | ದಕ್ಷಿಣ ಕನ್ನಡ | 0.00 | 0.00 |
| 10. | ಧಾರವಾಡ | 25.48 | 8.49 |
| 11. | ಗುಲ್ಬರ್ಗಾ | 20.23 | 6.74 |
| 12. | ಹಾಸನ | 11.35 | 3.78 |
| 13. | ಹಾವೇರಿ | 20.09 | 6.70 |
| 14. | ಕೊಡಗು | 0.00 | 0.00 |
| 15. | ಕೋಲಾರ | 27.91 | 9.30 |
| 16. | ಕೊಪ್ಪಳ | 14.93 | 4.98 |
| 17. | ಮಂಡ್ಯ | 10.55 | 3.52 |
| 18. | ಮೈಸೂರು | 0.00 | 0.00 |
| 19. | ರಾಯಚೂರು | 9.51 | 3.17 |
| 20. | ಶಿವಮೊಗ್ಗ | 17.74 | 5.91 |
| 21. | ತುಮಕೂರು | 19.65 | 6.55 |
| 22. | ಉಡುಪಿ | 11.84 | 3.95 |
| 23. | ಉತ್ತರ ಕನ್ನಡ | 23.03 | 7.68 |
| | **ಒಟ್ಟು** | **376.33** | **123.50** |

**ಟಿಪ್ಪಣಿ:** ರಾಜ್ಯದ ಆಯವ್ಯಯದಲ್ಲಿ ಹಣದ ಕೊರತೆಯಿರುವ ಕಾರಣ ಬೆಳಗಾಂ ಜಿಲ್ಲಾ ಪಂಚಾಯತ್‌ಗೆ ರೂ.8.79 ಲಕ್ಷದ ಬದಲು ರೂ. 6.85 ಲಕ್ಷ ಮಾತ್ರ ಬಿಡುಗಡೆ ಮಾಡಿದೆ.

**ಟಿ. ಶಾಮಭಟ್**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 281

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಚೌಡೇಗೌಡ, ಹಿಂದಿನ ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆ, ಹಾಸನ (ಪ್ರಸ್ತುತ ಉಪ ನಿರ್ದೇಶಕರು, ಸ್ಥಳ ನಿರೀಕ್ಷಣೆಯಲ್ಲಿ) ಇವರ ವಿರುದ್ಧ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ.ನಅಇ 67 ನಯೋಸೇ 99, ಬೆಂಗಳೂರು, ದಿನಾಂಕ: 22-2-2000.
2. ಪತ್ರ ಸಂಖ್ಯೆ.ಎಲ್‌ಓಕೆ:ಎಆರ್‌ಇ-4:ಇಎನ್‌ಕ್ಯೂ-8:2002-03, ದಿನಾಂಕ: 31-10-2002.
3. ಪತ್ರ ಸಂಖ್ಯೆ ನಅಇ 67 ನಯೋಸೇ 99 ದಿನಾಂಕ:5-2-2003.
4. ಪತ್ರ ದಿನಾಂಕ:10-3-2003 ಶ್ರೀ ಚೌಡೇಗೌಡ ಪ್ರಸ್ತುತ ನಗರ ಯೋಜನಾ ಉಪ ನಿರ್ದೇಶಕರು.

**ಪ್ರಸ್ತಾವನೆ:**

ಶ್ರೀ ಚೌಡೇಗೌಡ ಹಿಂದಿನ ಸಹಾಯಕ ನಿರ್ದೇಶಕರು, ಹಾಸನ (ಪ್ರಸ್ತುತ ಉಪ ನಿರ್ದೇಶಕರು ಸ್ಥಳ ನಿರೀಕ್ಷಣೆಯಲ್ಲಿ) ಇವರು ನಗರ ಯೋಜನಾ ಇಲಾಖೆ, ಹಾಸನ ಇಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ:11-10-1993 ರಂದು ಶ್ರೀ ಹಲಗೇಗೌಡ, ಸತ್ಯಮಂಗಲ ಗ್ರಾಮ ಇವರ ಜಮೀನನ್ನು ವಸತಿ ಉದ್ದೇಶಕ್ಕಾಗಿ ಪರಿವರ್ತಿಸುವ ಸಂಬಂಧ ರೂ.4000-00 ಗಳ ಅಕ್ರಮ ಸಂಭಾವನೆ ಸ್ವೀಕರಿಸುತ್ತಿದ್ದಾಗ ಗೌ:ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದಿರುತ್ತಾರೆ.

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಲೋಕಾಯುಕ್ತಕ್ಕೆ ವಹಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಗೌ:ಲೋಕಾಯುಕ್ತರು ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀ ಚೌಡೇಗೌಡ ಇವರ ಮೇಲೆ ಮಾಡಿರುವ ಆಪಾದನೆಗಳು ಸ್ಥಿರವಾಗಿದ್ದು ಸದರಿ ಅಧಿಕಾರಿಯ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು

ಮೇಲ್ಮನವಿ) ನಿಯಮಗಳು 1957ರ ನಿಯಮ 8(6)ರನ್ವಯ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಶ್ರೀ ಚೌಡೇಗೌಡ, ಉಪ ನಿರ್ದೇಶಕರು, ಇವರಿಗೆ ಎರಡನೇ ಕಾರಣ ಕೇಳುವ ನೋಟೀಸಿನಲ್ಲಿ ವಿಚಾರಣಾ ವರದಿಯನ್ನು ಕಳುಹಿಸಿ ಆಪಾದನೆಗಳು ರುಜುವಾತಾಗಿರುವುದರಿಂದ ಸೂಕ್ತ ದಂಡನೆಯನ್ನು ವಿಧಿಸಲು ಸರ್ಕಾರವು ಉದ್ದೇಶಿಸಿರುವುದರಿಂದ ಈ ಬಗ್ಗೆ ಅವರ ಹೇಳಿಕೆಯನ್ನು ನೀಡುವಂತೆ ಕೋರಲಾಗಿತ್ತು.

ಶ್ರೀ ಚೌಡೇಗೌಡ, ಯೋಜನಾ ಉಪ ನಿರ್ದೇಶಕರು ಇವರು ಮೇಲೆ ಓದಲಾದ (4)ರ ಪತ್ರದಲ್ಲಿ ಗೌ: ಲೋಕಾಯುಕ್ತರ ವರದಿಯನ್ನು ತಳ್ಳಿಹಾಕಿ ದೋಷಮುಕ್ತರನ್ನಾಗಿ ಮಾಡುವಂತೆ ವಿನಂತಿಸಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ.ನಅಇ 67 ನಯೋಸೇ 99, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(6) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಚೌಡೇಗೌಡ, ಹಿಂದಿನ ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆ, ಹಾಸನ (ಪ್ರಸ್ತುತ ಉಪ ನಿರ್ದೇಶಕರು, ಸ್ಥಳ ನಿರೀಕ್ಷಣೆಯಲ್ಲಿ) ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 282

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ**

**ವಿಷಯ:** ವಾರ್ತಾ ಇಲಾಖೆಯಲ್ಲಿ ಉಪನಿರ್ದೇಶಕರು (ಚಲನಚಿತ್ರ) ಹುದ್ದೆಯನ್ನು ಫೋಟೋ ಮತ್ತು ಫಿಲಂಸ್ ಅಧಿಕಾರಿಯ ಬಡ್ತಿಯಿಂದ ತುಂಬುವ ಬಗ್ಗೆ (ವೇತನ ಶ್ರೇಣಿ ರೂ. 9580-14200) ಮುಂಬಡ್ತಿ ವಿಧಾನ ನಿಗದಿಪಡಿಸಲು ಕಾರ್ಯಕಾರಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ. ವಾಪ್ರಯು 123 ವಾಪ್ರಸಿ 86, ದಿನಾಂಕ: 03.03.1987.
2. ನಿರ್ದೇಶಕರು, ವಾರ್ತಾ ಇಲಾಖೆ, ಬೆಂಗಳೂರು ಅವರ ಪತ್ರ ಸಂ.ವಾಇ : ಇಎಪಿ : (ಜಿ) 7: 2001-02: 21388 ದಿನಾಂಕ: 24.01.2002.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 1ರ ಆದೇಶದಲ್ಲಿ ವಾರ್ತಾ ಇಲಾಖೆಯಲ್ಲಿ ಚಲನಚಿತ್ರ ಮತ್ತು ಛಾಯಾ ಚಿತ್ರ ವಿಭಾಗಗಳ ಕೆಲಸ ನಿರ್ವಹಿಸುವ ಸಲುವಾಗಿ ಉಪನಿರ್ದೇಶಕರು ಚಲನಚಿತ್ರ ಹುದ್ದೆಯನ್ನು ಸೃಜಿಸಲಾಗಿದೆ. ಇಲಾಖೆಯ ಪ್ರಸ್ತಾಪಿತ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಯಲ್ಲಿ ಒಂದು ಉಪನಿರ್ದೇಶಕರ ಹುದ್ದೆಯನ್ನು ಉಪನಿರ್ದೇಶಕರು ಚಲನಚಿತ್ರ ಎಂದು ವಿಂಗಡಿಸಿ ಸದರಿ ಹುದ್ದೆಯನ್ನು ಫೋಟೋ ಮತ್ತು ಫಿಲಂಸ್ ಅಧಿಕಾರಿಯ ಬಡ್ತಿಯಿಂದ ತುಂಬಲು ಉದ್ದೇಶಿಸಲಾಗಿದೆ. ವೃಂದ ಮತ್ತು ನೇಮಕಾತಿ ನಿಯಮಗಳನ್ನು ತಿದ್ದುಪಡಿ ಮಾಡಿ ಅಧಿಸೂಚನೆಯನ್ನು ಇನ್ನೂ ಹೊರಡಿಸಿಲ್ಲವಾದ್ದರಿಂದ ಉಪನಿರ್ದೇಶಕರು ಚಲನಚಿತ್ರ ಹುದ್ದೆಯನ್ನು ತಾಂತ್ರಿಕ ವರ್ಗದವರಿಗೆ ಬಡ್ತಿ ನೀಡುವ ಮೂಲಕ ತುಂಬಬಹುದಾದ ವಿಧಾನವನ್ನು ಸೂಚಿಸಿ, ಸದರಿ ಹುದ್ದೆಗೆ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ಒಂದು ಕಾರ್ಯಕಾರಿ ಆದೇಶವನ್ನು ಹೊರಡಿಸಲು ನಿರ್ದೇಶಕರು ತಮ್ಮ ಪತ್ರ ದಿನಾಂಕ: 24.01.2002ರಲ್ಲಿ ಪ್ರಸ್ತಾವಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂ. ವಾಪ್ರಯು 218 ವಾಪ್ರಸಿ 2001, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2004**

ವಾರ್ತಾ ಇಲಾಖೆಯಲ್ಲಿ ರೂ. 9580-14200ರ ವೇತನ ಶ್ರೇಣಿಯ ಒಂದು ಉಪನಿರ್ದೇಶಕರು ಚಲನಚಿತ್ರ ಹುದ್ದೆಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ನೇಮಕಾತಿಯ ವಿಧಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಸೇವಾ ನಿಯಮಗಳು ಅವರ ದಿನಾಂಕ:10.06.2002ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 30 ಸೇನಿಡಿ 2002ರಲ್ಲಿ ನೀಡಿದ ಅನುಮೋದನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸೀತಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**ಸರ್ಕಾರಿ ಆದೇಶ ಸಂ. ವಾಪ್ರಯು 218 ವಾಪ್ರಸಿ 2001, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2004ರ ಅನುಬಂಧ**

| ಕ್ರ. ಸಂ. | ಹುದ್ದೆಗಳ ದರ್ಜೆ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಟ ವಿದ್ಯಾರ್ಹತೆ |
|---|---|---|---|---|
| 1. | Deputy Director (Films) | One | By Promotion from the Cadre of Photo and Film Officer | Must have put in not less than three years of service in the cadre of Photo and Film Officer |

**ಎಸ್. ಸೀತಮ್ಮ**

ಪಿ.ಆರ್. 283

ಸರ್ಕಾರದ ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

## FOREST, ECOLOGY AND ENVIRONMENT SECRETARIAT

**Sub:** Diversion of 18.80 ha.(Revised 18 ha) of forest land for setting up a 2 MW Wind Power Project at Sogi RF in favour of M/s KREDL, Bangalore.

**Read:**
1. Letter No. A5(5)GFL.KREDL.CR-5 /02-03, Dated: 28.11.2002, 19.3.2003, 31.10.2003 and 20.11.2003 of Principal Chief Conservator of Forests, Bangalore.
2. State Government letter No. FEE 411 FGL 2002, dated: 22.1.2003. 27.3.2003, 22.11.2003 and 6.12.2003.
3. Letter No. F©A/16.1/99/KAR/Misc, dated: 24.2.2003,13.8.2003 and 15.12..03 of Government of India, Ministry of Environment and Forests, Regional Office(South Zone), Bangalore.

**PREAMBLE:**

The Principal Chief Conservator of Forests, Bangalore vide his letter dated 28.11.2002 read at (1) above has submitted the proposal to obtain the approval of Government of India under Section 2 of Forest (Conservation) Act, 1980 for diversion of 18.80 ha. of forest land in Sy.No.528/1 of Sogi Village, Sogi RF of Hadagali Taluk, Bellary District in favour of Karnataka Renewable Energy Development Ltd., Bangalore subject to certain conditions.

Accordingly the proposal was sent to Government of India vide State Government letter dated 22.01.2003 read at(2) above.

Government of India, Ministry of Environment and Forests, Regional Office, (South Zone), Bangalore vide their letter dated 24.2.2003 read at (3) above has sought some certain clarifications and request to clearly spell out exact area required and the same has communicated to the Principal Chief Conservator of Forests, Bangalore. Accordingly, the Principal Chief Conservator of Forests, Bangalore vide their letter dated 19.3.2003 read at (1) above has furnished the clarifications and the KREDL, the user agency in their letter No. KRED/08/S&M/2003/345, dated: 11.3.2003 (addressed to Principal Chief Conservator of Forests, Bangalore ) has clearly mention the area required for the project is only 18.00 ha. The same has sent to Government of India vide State Government letter dated 27.3.2003 read at (2) above.

Government of India Ministry of Environment and Forests, Regional Office, (South Zone), Bangalore vide their letter dated 13.8.2003 read at (3) above has conveyed its approval in Principle (Stage-I) to the proposal subject to fulfillment of certain conditions. The Principal Chief Conservator of Forests, Bangalore vide their letter dated: 31.10.2003 read at (1) above has furnished the compliance and the same has communicated to Government of India vide State Government letter dated: 22.11.2003 read at (2) above.

Further, the Principal Chief Conservator of Forests, Bangalore vide his letter dated 20.11.2003 read at (1) above has intimated that the user agency i.e, KREDL have paid the Net Present Value of Rs.1,04,40,000.00 at the rate of Rs. 5.80 lakhs per ha. (minimum fixed by Hon`ble Supreme Court) and the user agency agreed to pay the difference, if any, subsequent and the same has intimated to Government of India vide State Government letter dated 6.12.2003 read at (2) above.

Government of India Ministry of Environment and Forests, Regional Office (South Zone),Bangalore in their letter dated 15.12.2003 read (3) above has conveyed its approval (Stage-II) for diversion of 18.00 ha. of forest land in Sy.No. 528/1 in Sogi Village, Sogi R.F. Hadagali Taluk, Bellary District for setting up a 2 MW Wind Power Project for generating Wind energy in favour of M/s KREDL for a period of 10 years subject to certain conditions.

Government of India, Ministry of Environment and Forests, New Delhi in their letter No. F.No. 8-84/2002-FC, dated 3.2.2004 has clarified that the non-forest which is transferred and mutated in favour of the State Forest Department for the purpose of compensatory afforestation, should be declared has RF/PF under the Indian Forest Act,1927. The land shall be handed over to the User Agency after the same has been mutated in favour of Forest Department. Stage-II clearance shall be given after the land is mutated in favour of the Forest Department but the Nodal Officer must report compliance within a period of six months and a send a copy of the Original Notification declaring the Non-forest land under Section 4 or Section 29 of the Indian Forest Act,1927 as the case may be to the Central Government for information and record.

The proposal has been examined in detail and hence the orders.

**Government Order No. FEE 411 FGL 2002, Bangalore, Dated: 27th February 2004.**

In the Circumstances explained in the preamble above Government are pleased to accord approval for diversion of 18 ha. of forest land in Sy.No.528/1 in Sogi Village, Sogi R.F. Hadagali Taluk, Bellary District for setting up a 2 MW Wind Power Project for generating Wind energy in favour of M/s Karnataka Renewable Energy Development Ltd.,for a period of 10 years subject to the following terms and conditions:-

1. The legal Status of the forest land shall remain unchanged.
2. The lessee shall pay the lease rent as fixed by the Government from time to time.
3. The lease period is for 10 years.
4. The Compensatory Afforestation shall be raised over the equivalent area of identified non-forest land at the cost of user agency.
5. The mutated forest land shall be declared as protected forest/reserve forest within six months & the copy of the original notification shall be furnished to Central Government by the Nodal Officer.
6. The road proposed to be constructed shall be executed in such a way so that the minimum damage to the hard soil is there and proper SMC works to be taken up to reduce soil and water erosion.
7. The total forest area utilized for the project shall not exceed 18 ha. In case the land is not used for the stipulated purpose then the area will be resumed by the forest department. No residential buildings shall be permitted in the proposed area.
8. The Wind Energy farm should be located at a safe distance(1 Km. or more) from the areas like National Parks and Sanctuaries, area of outstanding natural beauty, natural heritage sites of Archeological importance, sites of special scientific interests and other important landscapes.
9. The vane tips of the wind turbine shall be painted with orange colour to avoid bird hits. The location of the wind mill shall be such that it does not stand in the migratory path of the birds and is not near the breeding sites of the migratory birds.
10. The distance of the wind mill turbines from the highways, villages and habitations etc., shall be at least 1 KM.
11. In case the user agency proposes to sub lease in favour of developers, it shall be done within a period of 4 years from the date of issue of this approval. In case the developers fail to develop wind farms, the land shall be reverted back to forest department without any compensation.
12. A lease rent of Rs. 30,000.00 per MW for the period of lease in addition to the compensatory afforestation, Net Present Value etc., shall be charged from the user agency. This amount shall be utilized in providing gas connection to the local villagers under the Joint Forest Management Programme and for other conservation measures. This amount shall be deposited with compensatory afforestation management and planning agency.
13. The intervening areas between two wind mill footprints shall be planted up with dwarf tree species at the project cost. The Principal Chief Conservator of Forests, Bangalore shall also consider developing medicinal plants, gardens in available gaps in Wind Farms with possible help from National Medicinal Plants Boards at user agency`s cost.
14. Soil and moisture conservation measures like contour trenching shall be taken up on the hillocks supporting the wind mill at the cost of user agency.
15. Adequate fire protection measures, including employment of fire watchers and maintenance of fire lines etc., shall be undertaken by the user agency in the project area at its own cost.
16. The Karnataka Forest Act and Karnataka Forest Rules will be applicable for any violation.
17. Extraction charges if any has to be paid by the user agency.
18. The user agency has to pay the balance amount of NPV due if any in accordance with the Government Notification No. FEE 247 FGL 2002, dated: 17.1.2004.
19. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By Order and in the name of the Governor of Karnataka,

P.R. 284

**S. R. VATSALA**

Under Secretary to Government, Forest, Ecology and Environment Department.

**Sub:** Grant of quarry leases in respect of building materials such as sand, jelly, stones, boulders and laterite stones in forest areas of the Western Ghats region.

**Read:** Proceedings of the meeting held on 30-12-2003 under the Chairmanship of the Hon'ble Minister for Forest.

**Preamble:**

The question of allowing mining and quarrying activities in the Western Ghats region has been engaging the attention of the Government for quite some time. In view of the sensitive ecology of the Western Ghats, the State Government is not in favour of allowing any mining activities in the region. All the old mining leases in the region that have expired have not been renewed and no new mining lease has been granted. However, quarrying of materials like sand, jelly, stones, boulders and laterite stones needs to be permitted, as these materials are required for various developmental activities like construction of residential buildings, offices, roads, culverts, bridges, etc. The matter was discussed in a number of meetings and it was decided to issue comprehensive guidelines to enable the field officers to scrutinize, process and recommend eligible applications for taking up quarrying of the above-mentioned materials in the forest areas of the Western Ghats region for submission to the Government of India for approval under the Forest (Conservation) Act, 1980.

Hence the order.

**Government Order No. FEE 115 FFM 2001, Bangalore, Dated: 26th February 2004**

In the circumstances explained in the preamble, Government hereby direct that the guidelines indicated in the Annexure appended should be followed while considering proposals for quarrying in the forest areas of the Western Ghats region for submission to the Government of India for approval under the Forest (Conservation) Act, 1980.

By Order and in the name of the Governor of Karnataka,

**S. R. VATSALA**

Under Secretary to Government,

Forest, Ecology and Environment Department.

**Annexure To G. O. No. FEE 115 FFM 2001, Bangalore, Dated: 26th February 2004**

**Guidelines for grant of quarry leases in respect of building materials such as sand, jelly, stones, boulders and laterite stones in forest areas of the Western Ghats region of Karnataka.**

1) Quarrying of materials used for building purposes such as sand, jelly, stones, boulders, laterite stones shall be allowed only for the following activities: Construction of residential buildings, roads, culverts, bridges and other government programmes.
2) Quarrying material shall be utilized within the district and that it shall not be transported outside the district, if quarried from forest areas.
3) Quarries shall be allowed only in the sites that have already been opened for this purpose, prior to 1980.
4) Quarrying shall not be allowed if it necessarily requires heavy blasting. Only chemicals such as Ammonium Nitrate shall be permitted for loosening the mineral.
5) If the above-mentioned building materials are available in non-forest area within 10 Kms of the proposed site, then quarrying in forest area will not be permitted.
6) The area of each quarry shall not be more than 0.5 ha.
7) The trees to be felled in the area should not exceed 10 in number.
8) The boundary of the quarry shall be fixed by enumerating the boundary trees and shall be clearly marked with metal stencils
9) Persons recommended for quarrying shall be as suggested by the Director of Mines and Geology and as per the guidelines of the Department of Mines and Geology.
10) The quarries will preferably be granted in clusters, so that it is easy to control and monitor. Each cluster shall have a maximum of 10 quarries.
11) If the total area of all the quarries in a cluster is more than 5 hectares, then clearance under the Environmental Protection Act will be necessary.
12) The quarry site shall be between 500 mts. to 2000 mts., from the non-forest areas / habitation.
13) No new roads shall be made / opened inside the forest.
14) Terrain shall be flat or with gentle slope not exceeding 30 degrees.
15) Evergreen and Semi Evergreen areas shall not be allowed for quarrying.

16) No quarrying shall be allowed along / near the rivers, tanks and other water bodies, except for sand, which is available in such areas only.
17) Any sites of specific importance like rich in bio-diversity, fragile eco-system, etc., shall not be allowed.
18) Habitat and corridors of any wildlife and "Protected Areas" shall not be allowed.
19) Various provisions under the CRZ notification, E.P. Act, Mines and Minerals Act shall be followed.
20) Conditions imposed while granting the permission under the Forest (Conservation) Act, 1980 shall be strictly followed.
21) In the case of quarrying of the above-mentioned materials, the preliminary applications seeking permission for using the forest land for non-forestry purpose shall be directly made to the concerned Conservator of Forests.

**S. R. VATSALA**
Under Secretary to Government,
Forest, Ecology and Environment Department.

P.R. 285

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತದೊಂದಿಗೆ ನಮೂದಾಗಿರುವ ಶ್ರೀಗಂಧದ ಕರಕುಶಲಕರ್ಮಿಗಳಿಗೆ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತದ ಮೂಲಕ ಶ್ರೀಗಂಧವನ್ನು ಪೂರೈಸುವ ಬಗ್ಗೆ.

**ಓದಲಾಗಿದೆ:**
1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ಕ್ರ.ಕೆಎಸ್‌ಹೆಚ್‌ಡಿಸಿ /ಡಿಇವಿ/ಎಸ್‌ಡಬ್ಲ್ಯುಎ/301/03-04 ದಿನಾಂಕ: 21-11-2003ರ ಅ.ಸ. ಪತ್ರ.
2. ಪ್ರಧಾನ ಕಾರ್ಯದರ್ಶಿ, ಅಖಿಲ ಕರ್ನಾಟಕ ಶ್ರೀಗಂಧದ ಕೆತ್ತನೆ ಕೆಲಸಗಾರರ ಕುಟುಂಬದ ಕ್ಷೇಮಾಭಿವೃದ್ಧಿ ಸಂಘ (ರಿ), ಬೆಂಗಳೂರು ಇವರ ದಿನಾಂಕ 21-11-2003ರ ಪತ್ರ.
3. ಸರ್ಕಾರದ ಆದೇಶ ಕ್ರಮಾಂಕ ಅಪಜೀ 07 ಎಫ್‌ಎಸ್‌ಡಬ್ಲ್ಯು 2003 ದಿನಾಂಕ 03-12-2003.
4. ಸರ್ಕಾರದ ಪತ್ರ ಕ್ರಮಾಂಕ ಅಪಜೀ 09 ಎಫ್‌ಎಸ್‌ಡಬ್ಲ್ಯು 2002 ದಿನಾಂಕ 29-12-2003ರ ಪತ್ರ.
5. ಮಾನ್ಯ ಅರಣ್ಯ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 30-12-2003ರಂದು ನಡೆದ ಸಭೆಯ ನಡೆವಳಿಗಳು.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರು ಕರ್ನಾಟಕ ರಾಜ್ಯದಲ್ಲಿ ನಿಗಮದಲ್ಲಿ ನೋಂದಾಯಿತರಾಗಿರುವ ಸುಮಾರು 1000 ಶ್ರೀಗಂಧದ ಕರಕುಶಲ ಕರ್ಮಿಗಳು ಇದ್ದು ಸುಮಾರು 5000 ಮಂದಿ ಕುಟುಂಬದ ಸದಸ್ಯರುಗಳು ಇವರುಗಳ ಮೇಲೆ ಅವಲಂಭಿತರಾಗಿದ್ದಾರೆ. ಶ್ರೀಗಂಧದ ಕರಕುಶಲ ವಸ್ತುಗಳ ಮಾರಾಟವು ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮದ ಒಟ್ಟಾರೆ ಮಾರಾಟ ಪ್ರಮಾಣದ ಶೇ.40 ರಷ್ಟಿದ್ದು, ಶ್ರೀಗಂಧದ ನಿಯಮಿತವಾದ ಪೂರೈಕೆಯಿಂದ ನಿಗಮದ ಮಾರಾಟಕ್ಕೆ ಧಕ್ಕೆಯುಂಟಾಗಿರುವುದಾಗಿ ತಿಳಿಸುತ್ತಾ, ದಿನಾಂಕ 10-12-2003 ರಂದು ಧಾರವಾಡದಲ್ಲಿ ನಡೆಸಲು ಉದ್ದೇಶಿಸಿರುವ ಹರಾಜಿನಲ್ಲಿ ಘಟಬದಲಾ, ಜಾಜ್‌ಪೋಕಲ್ 1 ಮತ್ತು 2 ಮತ್ತು ರೂಟ್ ಕ್ಲಾಸ್ 1 ಮತ್ತು 2ನ್ನು ಹರಾಜು ಮಾಡದಂತೆ ತಡೆಹಿಡಿದು, ಅದನ್ನು ನಿಗಮಕ್ಕೆ ನೀಡುವಂತೆ ಸರ್ಕಾರವನ್ನು ಕೋರಿರುವರು.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ 10-12-2003 ರಂದು ಅರಣ್ಯ ಇಲಾಖೆಯು ಶ್ರೀಗಂಧವನ್ನು ಹರಾಜು ಮಾಡಲು ಉದ್ದೇಶಿಸಿದ್ದು ಕೆತ್ತನೆ ಕೆಲಸಕ್ಕೆ ಯೋಗ್ಯವಿರುವ ಸದರಿ ಶ್ರೀಗಂಧವನ್ನು ಅರಣ್ಯ ಇಲಾಖೆಯು ಹರಾಜು ಮಾಡುವುದರಿಂದ ಕರಕುಶಲಕರ್ಮಿಗಳಿಗೆ ಅನ್ಯಾಯ ಮಾಡಿದಂತಾಗುವುದರಿಂದ ಹರಾಜು ಮಾಡುವುದನ್ನು ಕೈ ಬಿಡುವಂತೆ ಅಖಿಲ ಕರ್ನಾಟಕ ಶ್ರೀಗಂಧದ ಕೆತ್ತನೆ ಕೆಲಸಗಾರರ ಕುಟುಂಬ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷರು ಮತ್ತು ಪ್ರಧಾನ ಕಾರ್ಯದರ್ಶಿಗಳು ಸರ್ಕಾರವನ್ನು ಕೋರಿರುವರು.

ಮೇಲೆ (3) ರಲ್ಲಿ ಓದಲಾಗಿರುವ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿರುವ ಶ್ರೀಗಂಧದ ಡಿಪೋ ಮತ್ತು ಶ್ರೀಗಂಧದ ಕೋಠಿಗಳಲ್ಲಿ ಲಭ್ಯವಿರುವ ಶ್ರೀಗಂಧದ ಮರಗಳನ್ನು ಕರ್ನಾಟಕ ರಾಜ್ಯದಲ್ಲಿರುವ ಶ್ರೀಗಂಧ ಕರಕುಶಲಕರ್ಮಿಗಳ ಉಪಯೋಗಕ್ಕಾಗಿ ಕ್ರಮಾಂಕ ಅಪಜೀ 38 ಎಫ್‌ಎಸ್‌ಡಬ್ಲ್ಯು 2003 ದಿನಾಂಕ 24-11-2003 ರಲ್ಲಿ ನಿಗದಿಗೊಳಿಸಿದ ಮಾರುಕಟ್ಟೆ ದರದ ಶೇಕಡಾ 50 ರಷ್ಟು ದರದಂತೆ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ಮುಖಾಂತರ ವಿತರಿಸುವ ಸಲುವಾಗಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಪೂರೈಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಧಾರವಾಡದ ಶ್ರೀಗಂಧದ ಕೋಠಿಯಲ್ಲಿರುವ ರೂಟ್ ಕ್ಲಾಸ್ 1 ಮತ್ತು 2, ಜಾಜ್ ಪೋಕಲ್ 2 ಮತ್ತು ಐನಬಾಗರ್ (Root Classes 1 and 2, Jajpokal 2 and Ainabagar) ಗಳ ಒಟ್ಟು 4,766 ಕೆ.ಜಿ ಶ್ರೀಗಂಧವನ್ನು ದಿನಾಂಕ 24-11-2003 ರ ಸರ್ಕಾರದ ಆದೇಶ ಕ್ರಮಾಂಕ ಅಪಜೀ 38 ಎಫ್‌ಎಸ್‌ಡಬ್ಲ್ಯು 2003 ರಲ್ಲಿ ನಿಗದಿಗೊಳಿಸಿದ ಮಾರುಕಟ್ಟೆ ದರದ ಶೇಕಡಾ 50ರಷ್ಟು ದರದಂತೆ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ

ನಿಯಮಿತಕ್ಕೆ ಸರಬರಾಜು ಮಾಡುವಂತೆ ಹಾಗೂ ಕೋಠಿಯಲ್ಲಿ ಉಳಿದಿರುವ ಶ್ರೀಗಂಧವನ್ನು ಬಹಿರಂಗ ಹರಾಜಿನ ಮೂಲಕ ವಿತರಿಸುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.

ದಿನಾಂಕ 30–12–2003 ರಂದು ಮಾನ್ಯ ಅರಣ್ಯ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸರ್ಕಾರದ ಶ್ರೀಗಂಧದ ಡಿಪೋಗಳಿಂದ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಯಾವ ವಿಧದ ಮತ್ತು ಎಷ್ಟು ಪ್ರಮಾಣದ ಶ್ರೀಗಂಧವನ್ನು ಪೂರೈಸಬೇಕೆಂಬ ಬಗ್ಗೆ ಪರಿಶೀಲಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಅಪಜೀ 09 ಎಫ್‌ಎಸ್‌ಡಬ್ಲ್ಯು 2002, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ರಾಜ್ಯದಲ್ಲಿರುವ ಶ್ರೀಗಂಧದ ಕರಕುಶಲ ಕರ್ಮಿಗಳ ಉಪಯೋಗಕ್ಕಾಗಿ ಸರ್ಕಾರದ ಶ್ರೀಗಂಧದ ಕೋಠಿ/ಶ್ರೀಗಂಧದ ಡಿಪೋಗಳಿಂದ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಶ್ರೀಗಂಧವನ್ನು ಪೂರೈಸುವ ಬಗ್ಗೆ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ:

1. ಸರ್ಕಾರಿ ಟಿಂಬರ್/ಶ್ರೀಗಂಧದ ಡಿಪೋ/ಕೋಠಿಗಳಿಂದ ಕೆಳಕಂಡ ಗುಣಮಟ್ಟದ ಶ್ರೀಗಂಧವನ್ನು ಆಯ್ಕೆ ಮಾಡಲು ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಅನುಮತಿಸಲಾಗಿದೆ:
Sandalwood billets (class I, II, III), Ghotla, Ghatabadla,
Bagardad, Roots (I, II, & III), Jajpokal (I & II).

2. ಖಾಸಗಿ ಮಾಲೀಕರಿಂದ ಪಡೆದಿರುವ ಶ್ರೀಗಂಧವನ್ನು ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತವು ಆಯ್ಕೆ ಮಾಡುವಂತಿಲ್ಲ.
(Sandalwood obtained from private owners will not be allowed to be selected by the Corporation).

3. ಪ್ರತಿಯೊಂದು ಸರ್ಕಾರಿ ಶ್ರೀಗಂಧದ ಡಿಪೋ/ಕೋಠಿಗಳಲ್ಲಿ ಮೇಲೆ (1)ರಲ್ಲಿ ಹೇಳಿರುವ ಗುಣಮಟ್ಟದ ಲಭ್ಯವಿರುವ ಸಾಮಗ್ರಿಯಲ್ಲಿ ಶೇ.75 ರಷ್ಟು ಸಾಮಗ್ರಿಯನ್ನು ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಹಂಚಿಕೆ ಮಾಡುವುದು.

ರಾಜ್ಯದಲ್ಲಿ ಹೀಗೆ ನಿಗಮಕ್ಕೆ ನೀಡುವ ಒಟ್ಟಾರೆ ಪ್ರಮಾಣವು ಒಂದು ವರ್ಷಕ್ಕೆ ಗರಿಷ್ಠ 100 ಮೆಟ್ರಿಕ್ ಟನ್‌ಗೆ ಸೀಮಿತವಾಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 286

**ಕೆ.ವಿ. ಜಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಆಕುಕ 24 ಎಂಎಂಸಿ 2004, ಬೆಂಗಳೂರು ದಿನಾಂಕ: 6ನೇ ಮಾರ್ಚ್ 2004**

ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜಿನ, ಮೈಸೂರು ವೈದ್ಯಕೀಯ ಕಾಲೇಜಿನ ಸರ್ಕಾರಿ ದಂತ ಕಾಲೇಜಿನ ಹಾಗೂ ಮಿಂಟೋ ಪ್ರಾದೇಶಿಕ ನೇತ್ರ ಚಿಕಿತ್ಸಕ ಸಂಸ್ಥೆಯ ನಿರ್ದೇಶಕ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01-01-2004 ರಲ್ಲಿರುವಂತೆ ಈ ಕೆಳಗೆ ನಮೂದಿಸಿರುವ ರೀತ್ಯಾ ಪ್ರಕಟಿಸಲಾಗಿದೆ.

| ಕ್ರ. ಸಂ. | ಪ್ರಾಂಶುಪಾಲರು ನಿರ್ದೇಶಕರ ಹೆಸರು ಮತ್ತು ಹೊಂದಿರುವ ಹುದ್ದೆಯ ಪದನಾಮ | ಜನ್ಮ ದಿನಾಂಕ | ಪ್ರಾಧ್ಯಾಪಕರಾಗಿ ನೇಮಕಾತಿಗೊಂಡ ದಿನಾಂಕ | ಪ್ರಾಂಶುಪಾಲರಾಗಿ ನೇಮಕಗೊಂಡ ದಿನಾಂಕ |
|---|---|---|---|---|
| 1. | ಡಾ: ಮೀರಾ ಡಿ. ಮೇವುಂಡಿ<br>ಪ್ರಾಂಶುಪಾಲರು,<br>ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. | 22-6-1946 | 10-11-1980 | 18-1-2001 |
| 2. | ಡಾ: ರಮಾನಂದಶೆಟ್ಟಿ,<br>ಪ್ರಾಂಶುಪಾಲರು, ಸರ್ಕಾರಿ ದಂತ ಕಾಲೇಜು, ಬೆಂಗಳೂರು. | 19-6-1950 | 8-9-1993 | 15-6-2001 |
| 3. | ಡಾ: ಎಸ್.ಎಂ. ಚಂದ್ರಶೇಖರಶೆಟ್ಟಿ<br>ಪ್ರಾಂಶುಪಾಲರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | 28-05-1946 | 08-09-1970 | 27-11-2003 |
| 4. | ಡಾ: ಎ.ಆರ್. ಅರುಣಾ,<br>ನಿರ್ದೇಶಕರು, ಮಿಂಟೊ ಪ್ರಾದೇಶಿಕ ನೇತ್ರ ಚಿಕಿತ್ಸಾ ಸಂಸ್ಥೆ,<br>ಬೆಂಗಳೂರು. | 11-03-1957 | 21-07-1982 | 27-11-2003 |

2) ಮೇಲ್ಕಂಡ ಜೇಷ್ಠತೆ ನಿರ್ಧರಣೆಯಲ್ಲಿ ಯಾವುದೇ ಆಕ್ಷೇಪಣೆಗಳಿದ್ದಲ್ಲಿ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 8 ದಿನಗಳ ಅವಧಿಯಲ್ಲಿ ಆಕ್ಷೇಪಣೆಗಳನ್ನು ತತ್ಸಂಬಂಧಿತ ದಾಖಲೆಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ನಿಗದಿತ ಅವಧಿ ನಂತರ ಸ್ವೀಕೃತವಾದ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 287

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)